


# ಅಲ್ಲಾಹೋ ಅಕಬರ!


ಲೇಖಕ:—

ಗೋಪಾಳ ನಾರಾಯಣ ಕರ್ಜಿಗಿ,

ಸ್ಕೂಲ ಮಾಸ್ತರ, ಕಳಕಾಪೂರ.





ಪ್ರಕಾಶಕ:—

ಯ. ಗು. ಕುಲಕರ್ಣಿ

ಸಂ. ಸ. ಚ. ಆನಂದವನ.





ಇದು ಆನಂದವನ-ಅಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಭೀ. ಪ. ಶಾಳೆ ಇವರಿಂದ ಮುದ್ರಿಸಲ್ಪಟ್ಟಿತು.

೧೯೩೧

ಬೆಲೆ ೧೨ ಆಣೆ.



# ಅಲ್ಲಾಹೋ ಅಕಬರ!



## ೧

ಶರತ್ಕಾಲದ ಗೋಧೂಳೀ ಸಮಯವು. ಅಸ್ತಮಯ ಸೂರ್ಯನ ಶೇಷಕಿರಣಗಳು ಆಕಾಶದಲ್ಲಿ ಅಲ್ಲಲ್ಲಿಗೆ ಇದ್ದ ಸಣ್ಣ ಸಣ್ಣ ಮೇಘಪುಂಜಗಳನ್ನು ನಾನಾಬಣ್ಣಗಳಿಂದ ರಂಜಿಸುತ್ತ ತಮ್ಮ ಶೇಷಸೊಬಗಿನಲ್ಲಿಯೇ ವಿಲೀನವಾಗಹತ್ತಿದ್ದವು. ಪಶ್ಚಿಮ ದಿಕ್ಕಿನಲ್ಲಿ ಸಂಧ್ಯಾ-ಸುಂದರಿಯು ಮುಖಕ್ಕೆ ಸಂಧ್ಯಾಛಾಯೆಯ ಸೆರಗನ್ನೆಳೆದುಕೊಂಡು ದ್ವಾದಶಿಯ ಚಂದ್ರಮನನ್ನು ಎದುರುಗೊಳ್ಳಲಿಕ್ಕೆ ಸಿದ್ಧಳಾಗಿದ್ದಳು.

ಕ್ರಮವಾಗಿ ಸೂರ್ಯದೇವನು ಪಶ್ಚಿಮಾಂಗನೆಯ ಅಂಗಸುಖದಲ್ಲಿ ವಿಲೀನನಾದನು. ಚಂದ್ರನು ಪೂರ್ವಾಕಾಶವನ್ನು ತನ್ನ ಧವಲಕಿರಣಗಳಿಂದ ಶೋಭಾಯಮಾನಗೊಳಿಸತೊಡಗಿದನು. ಅತ್ಯಲ್ಪ ಶೀತೋಷ್ಣ ಮಂದಮಾರುತನು ಅದೇ ಅರಳುತ್ತಿರುವ ಮಲ್ಲಿಗೆ, ಸಂಪಿಗೆ, ಜಾಜಿ, ಪನ್ನಾಗ, ಕುಮುದ ಪುಷ್ಪಗಳ ಸುಗಂಧವನ್ನು ಬೀರುತ್ತ ನಿರಾಶೆಯಾದವರಿಗೂ ಕೂಡ ಭೂತಕಾಲದ ವಿಸ್ಮೃತಿಯನ್ನು ಕ್ಷಣಕಾಲವಾದರೂ ಮಾಡುತ್ತಿದ್ದನು. ಇಂಥ ವೇಳೆಯಲ್ಲಿ ಗೌಡರಾಜಧಾನಿಯ ಅರಮನೆಯ ಹತ್ತರಿರುವ ಉದ್ಯಾನದಲ್ಲಿಯ ಒಂದು ಸಂಗಮರವರೀ ಶಿಲೆಯ ಮೇಲೆ ಒಬ್ಬ ಪ್ರೌಢಯುವಕನೂ ಚಿಕ್ಕಬಾಲಿಕೆಯೂ ಕುಳಿತಿದ್ದರು. ಇಬ್ಬರೂ ಆತ್ಮವಿಚಾರದಲ್ಲಿ ಮಗ್ನರಾಗಿ ಪ್ರಕೃತಿಯ ಸಹಜ ಶೋಭೆಯನ್ನು ನೋಡುತ್ತ ಕುಳಿತಿದ್ದರು. ಮತ್ತು ಗಂಭೀರವಾದ ಮೌನವನ್ನು ಧರಿಸಿದ್ದರು. ಬಾಲಿಕೆಯು ಆ ಸ್ತಬ್ಧತೆಯನ್ನು ಭಂಗಮಾಡಿ:—‘ಒಳ್ಳೇದು

ಅಪ್ಪಾ, ಸೂರ್ಯಾಸ್ತ ಮತ್ತು ಚಂದ್ರೋದಯ ಇವೆರಡರಲ್ಲಿ ಯಾವದು ಸುಂದರವಾದದ್ದು?" ಎಂದಳು.

ತಂದೆಯು— ಅಮ್ಮಾ, ಎರಡೂ ಚಂದವೇ. ದೇವರ ಸೃಷ್ಟಿಯಲ್ಲಿ ಸ್ವಾರಸ್ಯವಿಹೀನ ಪದಾರ್ಥಗಳೇ ಇಲ್ಲ.

ಮಗಳು ಪ್ರತಿ ಮಾತಾಡದೆ ಆಕಾಶದ ಕಡೆಗೆ ನೋಡಹತ್ತಿದಳು. ತಂದೆಯು ಕ್ಷಣಕಾಲ ಸುಮ್ಮನಿದ್ದು ನಂತರ:—ನಿಸರ್ಗಶೋಭೆಯು ಸಹಜ ಸುಂದರವಿದ್ದರೂ ಮನುಷ್ಯರ ರುಚಿಭೇದದಲ್ಲಿಯೇ ತಾರತಮ್ಯವು ಒಂದೇ ವಸ್ತುವು ಎಲ್ಲರ ಪ್ರೀತಿಗೆ ಪಾತ್ರವಾಗಲರಿಯದು. ಒಂದೇ ಮುಖದಲ್ಲಿ ಆನಂದಪೂರಿತ ನಗೆಯನ್ನೂ, ಕ್ಷಣದಲ್ಲಿ ದುಃಖಾಶ್ರುಗಳನ್ನೂ ನೋಡುತ್ತೀವೆ ದೇವರಿಗೆ ಎರಡೂ ಚಂದವೇ. ಒಂದು ಸ್ನಿಗ್ಧಸುಂದರ, ಮತ್ತೊಂದು ಭೀಷಣಸುಂದರವು.

ಮಗಳು ಮುಗುಳು ನಗೆಯಿಂದ:—ಅಪ್ಪಾ, ಈ ಎರಡರಲ್ಲಿ ನಿನಗೆ ಯಾವದು ಪ್ರಿಯವು?

ತಂದೆ—ನನಗೆ ಸೂರ್ಯಾಸ್ತಕ್ಕಿಂತ ಚಂದ್ರೋದಯವೇ ಪ್ರಿಯವು; ಯಾಕಂದರೆ, ಸೂರ್ಯಾಸ್ತದಲ್ಲಿ ವಿಷಾದಪೂರಿತ ನಿರಾಶೆಯು ಅಡಕವಾಗಿರುವದು. ಅದರ ಅವಲೋಕನದಿಂದ ಮನುಷ್ಯನ ಅವಸಾನವು ಕಡಿಮೆಯಾಗಿ ನಿರುದ್ಯೋಗಿಯಾಗುವನು; ಆದರೆ ಚಂದ್ರೋದಯವು ಮನುಷ್ಯನಲ್ಲಿ ನವಚೈತನ್ಯವನ್ನುಂಟು ಮಾಡುವದು. ಅದರ ಸ್ನಿಗ್ಧತೆಯಿಂದ ತಪ್ತಹೃದಯವು ಕೂಡ ಶಾಂತವಾಗುವದು; ಮನೋಶಾಂತಿಯ ಉದ್ರೇಕವಾಗುವದು. ಕಾರಣ ನನಗೆ ಚಂದ್ರೋದಯವೇ ಉತ್ತಮವೆನಿಸುವದು.

ಮಗಳು ಗಂಭೀರಭಾವದಿಂದ:—ಅಪ್ಪಾ, ಜಗತ್ತಿನಲ್ಲಿಯ ಈ ವಿಚಿತ್ರ ನ್ಯಾಯವನ್ನು ನೋಡಿದಿಯಾ? ಮನುಷ್ಯನು ಎಷ್ಟೇ ಪ್ರತಿಭಾಶಾಲಿ ಇರಲಿ, ಶೂರನಿರಲಿ, ಉದಾರನಿರಲಿ. ಅವನ ಅಧಿಕಾರ ಇರುವ ವರೆಗೆ ಅವನಿಗೆ ಗೌರವವು. ಅವನ ಅಧಿಕಾರವು ಹೋದ ಕೂಡಲೆ ಯಾರೂ ಅವನ ಕಡೆಗೆ ಕಣ್ಣೆತ್ತಿ ಸಹ ನೋಡುವದಿಲ್ಲ; ಮತ್ತು ಅಧಿಕಾರವುಳ್ಳವನು ಹೇಡಿ ಇರಲಿ, ನೀಚನಿರಲಿ. ಜನರು ಅವನಿಗೇ ಹೆಚ್ಚು ಆದರ ಮಾಡುವರು. ಇದು ಮಾನವ ಜಾತಿಯ ಸ್ವಾರ್ಥದ ಪರಿಣಾಮವಲ್ಲವೆ? ನೋಡು, ಜಗತ್ತಿನ [illegible] ಪಾತ್ರನಾದ ಸೂರ್ಯನು ಕೂಡ ಅಸ್ತಮಾನಕಾಲದಲ್ಲಿ

ಗೌರವವನ್ನು ಕಳಕೊಳ್ಳುವನು. ಕಲಂಕಿತನಾದ ಚಂದ್ರಮನೇ ಶ್ರೇಷ್ಠನೆನಿಸಿಕೊಳ್ಳುವನು!

ತಂದೆಯು ಗೌಡರಾಜ್ಯದ ಯುವರಾಜನಾದ "ಅಜಿಮನು" ಬಾಲಿಕೆಯು ಅವನ ಮಗಳು "ಅಶಮಾನತಾರಾ." ಅಜಿಮನು ವಿಧುರನು. ಮಗಳ ಮೇಲೆ ಪ್ರೀತಿಯು ಬಹಳ. ಅವಳು ರೂಪದಲ್ಲಿಯೂ ಗುಣದಲ್ಲಿಯೂ ತಾಯಿಯ ಪ್ರತಿಬಿಂಬವಾಗಿದ್ದಳು ಅವನು ಮಗಳ ಭಾವಪೂರಿತ ಗಂಭೀರಮಾತುಗಳಿಂದ ಆನಂದಹೊಂದಿ ಅವಳನ್ನು ಎದೆಗೆ ಅವಚಿಕೊಂಡು:—ಮಗೂ, ಅಶಮಾನ್, ನಿನ್ನ ವಿಚಾರವು ಜಗತ್ತಿನಲ್ಲಿಯ ಅನುಭವಿಕರನ್ನು ಕೂಡ ನಾಚಿಸುವಂತಿದೆ. ಎಷ್ಟು ದೂರದೃಷ್ಟಿಯು ರಾಜನೀತಿ, ಧರ್ಮನೀತಿಗಳಲ್ಲಿಯೂ ಕೂಡ ನಿನ್ನ ವಿಚಾರಂಗಳು ಎಲ್ಲರನ್ನು ದಂಗುಬಡಿಸುತ್ತವೆ, ಎಂದನು

ಅಶಮಾನಳು ಕೆಲವು ಹೊತ್ತು ಗಂಭೀರಭಾವದಿಂದ ಆಕಾಶದ ಕಡೆಗೆ ನೋಡಿ ತಂದೆಯನ್ನು ಕುರಿತು:—ಅಪ್ಪಾ, ಒಂದು ವಿಷಯದಲ್ಲಿ ನಿನ್ನ ವಿಚಾರವನ್ನು ಕೇಳಬೇಕೆಂದು ಬಹು ದಿವಸದಿಂದ ಮನಸ್ಸಿನಲ್ಲಿರುವದು.

ಅಜಿಮ:—ಅದಕ್ಕೇಕೆ ಸಂಕೋಚವು? ನಿನಗಿಂತ ಪ್ರಿಯವಸ್ತುವು ನನಗೆ ಜಗತ್ತಿನಲ್ಲಿಯೇ ಇಲ್ಲ.

ಅಶಮಾನ:—ಹಿಂದೂ ಮುಸಲ್ಮಾನರಲ್ಲಿ ನೀನು ಯಾರನ್ನು ಹೆಚ್ಚು ಪ್ರೀತಿಸುವಿ?

ಅಜಿಮ:—ಇದರಲ್ಲೇನು? ಹಿಂದುಗಳು ಹಿಂದುಗಳನ್ನು ಮುಸಲ್ಮಾನರು ಮುಸಲ್ಮಾನರನ್ನು ಪ್ರೀತಿಸುವದು ಸಹಜವಿದೆ.

ಅಶಮಾನ:—ಅಪ್ಪಾ, ಇದು ಸಾಮಾನ್ಯ ಜನರ ಮಾತು; ಆದರೆ ನೀನು ಭಾವೀ ಗೌಡಸಾಮ್ರಾಟನು. ಅಂದಬಳಿಕ ಸ್ವಜಾತಿಯವರನ್ನೇ ಹೆಚ್ಚು ಪ್ರೀತಿಸುವದು ನಿನಗೆ ಯೋಗ್ಯವಾದೀತೇನು?

ಅಜಿಮ:—ನಾನು ಹಿಂದುಗಳನ್ನೇ ಹೆಚ್ಚು ಪ್ರೀತಿಸಬೇಕೆಂದು ನಿನ್ನ ಅಭಿಪ್ರಾಯವೇನು? ಅಶಮಾನ್, ಇದು ನಿನ್ನ ತಪ್ಪು ಗ್ರಹಿಕೆಯು ನಾವು ಸ್ವಜಾತಿಯ ಜನರ ಸಹಾಯದಿಂದ ಹಿಂದುಗಳನ್ನು ಪದಾಕ್ರಾಂತ ಮಾಡಿಕೊಂಡಿರುವೆವು. ಈಗ ಸ್ವಜಾತಿಯವರನ್ನು ಬಿಟ್ಟು ಅವರನ್ನು ಹೆಚ್ಚುನುವಂತೆ ಮಾಡಿದರೆ ನ್ಯಾಯವಾದೀತೆ? ಇದು ಅಶಕ್ಯವು. ಸಾಮ್ರಾಜ್ಯ

ಲಾಭವು ಅತ್ಮಪ್ರತಿಷ್ಠೆ ಹೋಗುವ ರಾಜಶಾಸನವು ಸ್ವಜಾತಿಯು ಗೌರವ ಮತ್ತು ಸಂಪತ್ತಿಯ ಹೆಚ್ಚಳದ ಸಲುವಾಗಿಯಲ್ಲವೆ? ಇದಲ್ಲದೆ ಪರಧರ್ಮದವರಿಗೆ ಆಶ್ರಯ ಕೊಡುವದು ರಾಜನೀತಿಯಲ್ಲ. ಇದರಿಂದ ಸ್ವರಾಜ್ಯವು ರಸಾತಳಕ್ಕೆ ಹೋಗುವದು.

ಅಶಮಾನಳು ಮುಗುಳುನಗೆ ನಕ್ಕು:—ಅಪ್ಪಾ, ಮೊದಲು ನನ್ನ ಮಾತು ಕೇಳು. ನಿನಗೆ ನಾನೊಬ್ಬಳೇ ಮಗಳಿರುವೆನಷ್ಟೇ? ನೀನು ಇರಾಣದಿಂದ ಒಬ್ಬ ಸಾಕುಮಗಳನ್ನು ತಂದಿರುವಿಯೆಂದು ಭಾವಿಸು. ಇಬ್ಬರು ಮಕ್ಕಳಲ್ಲಿ ನೀನು ಯಾರನ್ನು ಹೆಚ್ಚು ಪ್ರೀತಿಸುವಿ?

ಅಜಿಮು:—"ನಿನ್ನನ್ನು"

ಅಶಮಾನ:—ಇದು ಯೋಗ್ಯವಲ್ಲ. ನಿನ್ನಿಂದ ಪ್ರೀತಿಯನ್ನು ಮಾಡಿಸಿಕೊಳ್ಳುವ ಹಕ್ಕು ನನಗಿರುತ್ತದೆ. ನಾನು ಹಟದಿಂದಲಾದರೂ ನಿನ್ನ ಕಡೆಯಿಂದ ಪ್ರೀತಿಮಾಡಿಸಿಕೊಳ್ಳುವೆನು; ಆದರೆ ಆ ಸಥಿಯು ಸಾಕುಮಗಳಿಗೆ ಹೇಗೆ ಬರಬೇಕು? ನೀನು ಪ್ರೀತಿಸದಿದ್ದರೆ ಅವಳು ಮನಸ್ಸಿನಲ್ಲಿಯೇ ವ್ಯಥೆಪಡಬೇಕಾಗುವದು ಅದೇ ಪ್ರಕಾರ ದೀನ ದೃಷ್ಟಿಯಿಂದ ನಮ್ಮನ್ನು ನೋಡುತ್ತ ಆಶ್ರಿತರಾಗಿರುವ ಹಿಂದುಗಳಮೇಲೆ ಹೆಚ್ಚು ಮಮತೆ ಮಾಡುವದು ಮಾನವೀ ಕರ್ತವ್ಯವು.

ಅಜಿಮ:—ಮಗಳೇ, ನಿನ್ನ ಮಾತು ಯೋಗ್ಯವಾಗಿ ಕಂಡರೂ ಇಲ್ಲಿ ಆ ಪ್ರಕಾರ ನಡೆಯುವದು ಅಸಂಭವವು. ನೀನು ಹೇಳಿದಂತೆ ಹಿಂದೂ ಜನರು ವಿಧೇಯರಾಗಿ ನಡೆಯುವದಿಲ್ಲ; ಅವರು ಮುಸಲ್ಮಾನರೇಹರೆ ತಮ್ಮ ಸಮಾಜದ, ಧರ್ಮದ, ಜಾತಿಯ ಶತ್ರುಗಳೆಂದು ತಿಳಿಯುತ್ತಾರೆ. ಅವರು ಶತ್ರುಗಳೆಂದು ತಿಳಿದು ವರ್ತಿಸುವಾಗ ನಾವು ಮಿತ್ರರೆಂದು ಆಲಿಂಗಿಸುವದು ಹೇಗೆ?

ಅಶಮಾನ:—ಸೋತವರು ಆರಂಭದಲ್ಲಿ ಗೆದ್ದವರನ್ನು ಶತ್ರುಗಳೆಂದು ಎಣಿಸುವದು ನಿಜವು; ಆದರೆ ಗೆದ್ದವರು ತಮ್ಮ ಉದಾರಹೃದಯದ ವರ್ತನದಿಂದ ಅವರ ಮನಸ್ಸನ್ನು ಆಕರ್ಷಣ ಮಾಡಿಕೊಂಡು ಅವರಲ್ಲಿ ಬಂಧು-ಭಾವನೆಯನ್ನು ಹುಟ್ಟಿಸಬೇಕು. ಹಿಂದೂಸಮಾಜವೇನು ಸಾಮಾನ್ಯವೇ? ಇಂದು ಅವರು ಮುಸಲ್ಮಾನರ ಶಕ್ತಿಯ ಅಧೀನಕ್ಕೊಳಪಟ್ಟಿದ್ದರೂ ಅವರ ಸ್ವಾತಂತ್ರ್ಯವು ಎಷ್ಟು ಪುರಾತನದ್ದು? ಅವರು ಸ್ವದೇಶವನ್ನು ಮಾತೃವಿನ

ಸಮಾನ ಎಣಿಸುವದು. ಅವರ ಧರ್ಮಾಭಿಮಾನದ ಮುಂದೆ ಜೀವಕ್ಕೆ ಬೆಲೆ ಇರುವದೇ? ಅವರೇನು ಹೀನವೀರ್ಯರೇ? ಅವರ ಉದಾರ ಹೃದಯಕ್ಕೆ ಕೃಪಣತನವು ಬಂದಿರುವದೆ? ಇಂಥ ವೀರ್ಯ ಬಲಶಾಲಿಯಾದ ಸಮಾಜವು ಇಂದಿಗೆ ಆತ್ಮಕಲಹ, ಆಲಸ್ಯ, ಅನೈಕ್ಯ ಮೊದಲಾದವುಗಳಿಂದ ರಾಜ್ಯವನ್ನು ಕಳಕೊಂಡು ಮುಸಲ್ಮಾನ ಧರ್ಮದ ಮುಂದೆ ತಲೆಬೊಗ್ಗಿಸಿಕೊಂಡು ನಿಂತಿರಲು, ನಾವು ನಮ್ಮ ಉದಾರವರ್ತನದಿಂದ ನಮ್ಮ ಬಗ್ಗೆ ಅವರಲ್ಲಿರುವ ಅವಿಶ್ವಾಸವನ್ನು ನಾಶಪಡಿಸಿ, ನಮ್ಮ ಬಗ್ಗೆ ಪ್ರೇಮವನ್ನು ಹುಟ್ಟಿಸಿಕೊಂಡು ಅವರಿಂದ ನಮ್ಮ ಧರ್ಮದ ನಿಜವಾದ ಉತ್ಕರ್ಷೆಯನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಬೂದಿಮುಚ್ಚಿದ ಕೆಂಡದಂತಿರುವ ಅವರ ಶೌರ್ಯ ಅಭಿಮಾನಗಳು ನಮ್ಮ ಹೀನವರ್ತನದಿಂದ ಜಾಗೃತಗೊಂಡು ನಮ್ಮ ಕಾಲಮೇಲೆ ನಾವೇ ಕಲ್ಲು ಹಾಕಿಕೊಳ್ಳುವ ಅವಿಚಾರಕ್ಕೆ ಎಡೆಗೊಟ್ಟಂತಾಗುತ್ತದೆ. ನೀನೇ ವಿಚಾರ ಮಾಡು.

ಅಜಿಮ:—ಅಶಮಾನ, ಇದೆಂಥ ವಿಚಾರವು? ಆಚಾರ-ವಿಚಾರ-ಧರ್ಮ ಮೊದಲಾದವು ನಮ್ಮವು ಮತ್ತು ಹಿಂದೂಜನರವು ಒಂದಕ್ಕೊಂದು ತೀರ ವಿರುದ್ಧವು ಹೀಗಿದ್ದು ಅವರಿಗೇ ಹೆಚ್ಚು ಗೌರವ ಕೊಡುವದು ಯಾವ ಮುಸಲ್ಮಾನನಿಗೆ ಒಪ್ಪಿಗೆಯಾದೀತು?

ಅಶಮಾನ:—ನಾನು ಮುಸಲ್ಮಾನರಿಗೆ ಹಿಂದೂಧರ್ಮವನ್ನು ಸ್ವೀಕರಿಸಲಿಕ್ಕೆ ಹೇಳುವದಿಲ್ಲ. ನಮ್ಮ ಪವಿತ್ರ ಕುರಾನವು ಪರಧರ್ಮದ ದ್ವೇಷವನ್ನೇ ಮಾಡಿರೆಂದು ಹೇಳುವದಿಲ್ಲ. ಅವರೂ ನಾವೂ ಒಂದೇ ದೇಶದಲ್ಲಿ ಒಂದೇ ತಾಯಿಯ ತೊಡೆಯ ಮೇಲೆ ಇರುವಾಗ, ಒಬ್ಬರನ್ನೊಬ್ಬರು ದ್ವೇಷಿಸದೆ ಸೌಜನ್ಯದಿಂದಲೂ, ಪ್ರೇಮದಿಂದಲೂ, ಐಕ್ಯದಿಂದಲೂ ನಡೆಯಬೇಕೆಂಬುದೇ ನನ್ನ ಉದ್ದೇಶವು. ಇಲ್ಲದಿದ್ದರೆ ಎರಡೂ ಧರ್ಮಗಳು ಸ್ಥಿರತ್ವದಿಂದ ಗೌರವವನ್ನು ಕಾಯ್ದುಕೊಳ್ಳದೆ ಈ ದೇಶವು ಅನ್ಯರಾಷ್ಟ್ರಗಳ ಪಾಲಾಗುವದು.

ಅಜಿಮನಿಗೆ ವಗೆಳ ಈ ವಿಚಾರಯುಕ್ತ ಮಾತುಗಳಿಂದ ಆನಂದವಾಯಿತು. ಅವನು:—ಅಶಮಾನ, ಈ ಭಿನ್ನಜಾತಿಗಳಲ್ಲಿ ಐಕ್ಯವುಂಟಾಗುವ ಬಗೆ ಹೇಗೆ?

ಅಶಮಾನ— ಅಪ್ಪಾ, ಹಿಂದೂ-ಮುಸಲ್ಮಾನರಲ್ಲಿಯ ಪ್ರೇಮವು

ಅಣ್ಣ ತಮ್ಮಂದಿರ ಪ್ರೇಮದಂತೆ ಅಂತರಂಗದಲ್ಲಿ ಉದ್ಭವಿಸಬೇಕು. ಯಜಮಾನ ಮತ್ತು ಸೇವಕ ಇವರಲ್ಲಿಯ ಪ್ರೇಮದಂತೆ ಇರಬಾರದು ಇಬ್ಬರ ಆಯುಧಗಳು ಮಿಲಿತವಾಗದೆ, ಇಬ್ಬರ ಹೃದಯಗಳು ಒಂದಾಗಬೇಕು. ಅಪ್ಪಾ, ಯಾವ ದಿವಸ ಹಿಂದೂ ಮುಸಲ್ಮಾನರಲ್ಲಿ ಈ ಪ್ರಕಾರ ಐಕ್ಯವುಂಟಾಗುವದೋ ಆ ದಿವಸವೇ ಶುಭ ದಿವಸವು. ಇಬ್ಬರ ಆಚಾರ-ವಿಚಾರಗಳಲ್ಲಿ ಉತ್ತಮವಾದವುಗಳನ್ನು ಮತ್ತೊಬ್ಬರು ಅನುಸರಿಸಬೇಕು. ಅಪ್ಪಾ, ನೀನು ಭಾವೀ ಸಾಮ್ರಾಟನು. ನಿನ್ನ ರಾಜ್ಯದಲ್ಲಿ ಇಂಥ ಅಪೂರ್ವ ಐಕ್ಯವುಂಟಾದರೆ ನಿನ್ನ ಕೀರ್ತಿಯು ಅಜರಾಮರವಾಗುವದು.

ಇಬ್ಬರ ಕಣ್ಣುಗಳಲ್ಲಿಯೂ ನೀರು ತಾನೇ ಹೋಗಹತ್ತಿದವು. ಅಜಿಮನು ಮಗಳನ್ನು ಎದೆಗೆ ಅವಚಿಕೊಂಡನು:---ಅಕಮಾನ್. ನಾನು ಈವರೆಗೆ ಹಿಂದೂ-ಮುಸಲ್ಮಾನರಲ್ಲಿ ಭೇದವೆಣಿಸಲಿಲ್ಲ. ಸಾಮ್ರಾಟಪದವು ನನಗೆ ದೊರೆತರೆ ನಾನು ಹಿಂದೂಜನರ ಸಂಗಡ ಹೆಚ್ಚು ಮಮತೆಯಿಂದ ನಡೆಯುತ್ತೇನೆ.

---

## ೨

ಸೈಫುದ್ದೀನನು ಗೌಡದ ಬಾದಶಹನು. ಶಹಾಜಾದಾ ಅಜಿಮನು ಅವನ ಹಿರೀಹೆಂಡತಿಯ ಮಗನು. ಚಿಕ್ಕ ಹೆಂಡತಿಯ ಹೊಟ್ಟೆಯಲ್ಲಿ ನಸರಿತ್‌ಶಹನೆಂಬ ಮಗನು ಇದ್ದನು. ಅವನು ಅಜಿಮನಿಗಿಂತ ಹಿರಿಯನು. ನಸರಿತ್‌ನು ತಾನು ಹಿರಿಯವನಾದ್ದರಿಂದ ಯುವರಾಜನು ತಾನೇ ಎಂದೂ, ಅಜಿಮನು ಹಿರೀ ಹೆಂಡತಿಯ ಮಗನಾದ್ದರಿಂದ ತಾನೇ ಯುವರಾಜನೆಂದೂ ಹೇಳಿಕೊಳ್ಳುತ್ತಿದ್ದರು. ಈ ಪ್ರಕಾರ ರಾಜಕುಟುಂಬದಲ್ಲಿ ಅಂತಸ್ಥ ಕಲಹವಿದ್ದರೂ ವಿಲಾಸಭೋಗಿಯಾದ ಸೈಫುದ್ದೀನನು ಭೋಗವಿಲಾಸದಲ್ಲಿ ಮಗ್ನನಾಗಿ ಈ ಬಗ್ಗೆ ಭವಿಷ್ಯತ್ತಿನ ವಿಚಾರವನ್ನೇ ಮಾಡಿದ್ದಿಲ್ಲ. ಈ ಅಂತಃಕಲಹವು ದಿನಬಾರದ [illegible] ಅವನು ಅದರ ಬಗ್ಗೆ ಸ್ವಲ್ಪು ಆಲೋಚನೆಯನ್ನು ಮಾಡಿದ್ದಿಲ್ಲ.

ಕ್ರಿ. ಶ. ೧೨೦೧ ರಲ್ಲಿ ಗೌಡರಾಜ ಮುಕುಟವು ರಾಜಾಲಕ್ಷ್ಮಣಸೇನನಿಂದ ಪಠಾಣರ ಹಸ್ತಗತವಾಗಿ ಸುಮಾರು ನೂರೈವತ್ತು ವರ್ಷಗಳಾಗಿ

ದ್ದವು ಈ ವರೆಗೆ ಪಠಾಣರು ಮನೆತನಂಶ ರಾಜ್ಯಕಾರಭಾರವನ್ನು ಮಾಡಿದ್ದರೂ ಹಿಂದೂಜನರು ಹತವೀರ್ಯರಾಗಿದ್ದಿಲ್ಲ. ಗೌಡದಂಬಾರದಲ್ಲಿ ಭಾದುಡೀ ಮತ್ತು ಸಾನ್ಯಾಲ ಎಂಬ ಎರಡು ಬ್ರಾಹ್ಮಣ ಮನೆತನಗಳು ಶೌರ್ಯದಲ್ಲಿ, ಮುತ್ಸದ್ದಿತನದಲ್ಲಿ ಪ್ರಸಿದ್ಧವಾಗಿದ್ದವು. ಸೈಫುದ್ದೀನನ ಕಾಲವಲ್ಲಿ ಸಾನ್ಯಾಲ ಮನೆತನದ ಗೌರವವು ಹೋಗಿ, ಭಾದುಡೀ ಮನೆತನದ ಗೌರವವು ಮಾತ್ರ ಹಾಗೇ ಇತ್ತು. ಈ ಮನೆತನವು ಬಾದಶಹನಿಗೆ ವರ್ಷಕ್ಕೆ ಒಂದು ರೂಪಾಯಿ ಮಾತ್ರ ಕಪ್ಪಕೊಡುತ್ತಿತ್ತು ಅದರಿಂದ ಇದಕ್ಕೆ 'ರೂಪಾಯಿವಾಲಾ' ಎಂದೂ ಅನ್ನುತ್ತಿದ್ದರು. ಈಗ ಅಲ್ಲಿ ರಾಜಾ ಗಣೇಶ ನಾರಾಯಣನೆಂಬುವನು ಇದ್ದು ಅವನ ವರ್ಚಸ್ಸು ಸೈಫುದ್ದೀನನ ದರಬಾರದಲ್ಲಿ ಬಹಳ ಇತ್ತು.

ರಾಜಪುತ್ರರ ಅಂತಃಕಲಹದಿಂದ ದರಬಾರದಲ್ಲಿ ಎರಡು ಬಣಗಳಾದವು ಮುಸಲ್ಮಾನರೆಲ್ಲರು ನಸೀರಶಹನ ಪಕ್ಷವನ್ನೂ, ಹಿಂದುಗಳು ಅಜೀಮನ ಪಕ್ಷವನ್ನೂ ಸಮರ್ಥನೆ ಮಾಡಹತ್ತಿದರು. ಆಗ ಸಾಮಾನ್ಯ ಮುಸಲ್ಮಾನರಲ್ಲಿ ಹಿಂದೂ ದ್ವೇಷವು ಪ್ರಬಲವಿತ್ತು. ಯೋಗ್ಯ ಸಮಯವು ದೊರೆತಾಗ ಹಿಂದುಗಳ ಮಾನಖಂಡನೆ ಮಾಡಲು ಮುಸಲ್ಮಾನರು ಸಿದ್ಧರು. ಇವೆಲ್ಲಕ್ಕೂ ಹಿಂದುಗಳ ಅನೈಕ್ಯವೂ ಲಾಂಗೂಲಚಾಲನವೂ ಕಾರಣವು. ಜಯಶಾಲಿಗಳಾದ ಮುಸಲ್ಮಾನರ ಐಕ್ಯವು ಅವರ ಪ್ರತಿಯೊಂದು ಕಾರ್ಯದಲ್ಲಿ ಅವರಿಗೆ ಜಯವನ್ನು ತಂದುಕೊಡುತ್ತಿತ್ತು.

ಅಕಸ್ಮಾತಾಗಿ ಸೈಫುದ್ದೀನನು ಮರಣ ಹೊಂದಿದನು ಅವನ ಮರಣವಾರ್ತೆಯು ಊರಲ್ಲಿ ಪೂರ್ಣ ಗೊತ್ತಾಗುವದರೊಳಗೆ ನಸೀರಶನು ಮುಸಲ್ಮಾನ ಮಂತ್ರಿಗಳ ಸಹಾಯದಿಂದ 'ಶಾಮುದ್ದೀನ' ಎಂಬ ಉಪಾಧಿಯನ್ನು ಧರಿಸಿ, ಸಿಂಹಾಸನವನ್ನೇರಿದನು. ಇದೆಲ್ಲ ಕಾರ್ಯವು ಒಂದು ಕ್ಷಣದಲ್ಲಿ ಆಯಿತು. ದುರ್ದೈವಿಯಾದ ಅಜೀಮನಿಗೆ ಸಿಂಹಾಸನವು ಹತ್ತಟ್ಟಗಿರಲಿ, ಜೀವದ ಮೇಲೆ ಗಂಡಾಂತರವು ಬಂತು. ತಾನು ಮುಗಳ ಮಾತು ಕೇಳಿ ಹಿಂದೂ-ಮುಸಲ್ಮಾನರನ್ನು ಸಮದೃಷ್ಟಿಯಿಂದ ನೋಡಿದ್ದು ಅಸಹ್ಯವಾಯಿತೆಂದು ಅವನು ಭಾವಿಸಿದನು. ಈ ಪ್ರಕಾರ ಅವನು ವಿಚಾರಮಗ್ನನಾಗಿರಲು, ಅಶಮಾನೆಳು ಅಲ್ಲಿಗೆ ಒಂದಳು. ಅಜೀಮನು ಮಗಳನ್ನು ನೋಡಿ ನಿಟ್ಟುಸಿರು ಬಿಟ್ಟು:— ಅಶಮಾನ, ನೋಡಿದಿಯಾ,

ನನ್ನ ದುರದೃಷ್ಟವನ್ನು? ರಾಜ್ಯವಂತೂ ಹೋಯಿತು, ಇನ್ನು ನಿನ್ನ ಸಂರಕ್ಷಣೆಯ ಬಗ್ಗೆ ಬಹಳ ಚಿಂತೆಯುಂಟಾಗಿದೆ. ಅಮ್ಮಾ, ಇನ್ನು ಯಾರ ಆಶ್ರಯಕ್ಕೆ ಹೋಗಲಿ?

ಅಶಮಾನಳು ಹುಬ್ಬು ಗಂಟಿಕ್ಕಿ— ಅಪ್ಪಾ, ನೀನು ರಾಜಪುತ್ರನಲ್ಲವೆ. ಯುವರಾಜನಲ್ಲವೆ? ಶೂರ ಪಠಾಣನಲ್ಲವೆ? ಇಂಥ ನಿನ್ನ ಮುಖದಿಂದ ದೀನವಾಣಿಯೇ?

ಅಜಿಮ:—ಎಲ್ಲವೂ ನಿಜವು; ಆದರೆ ನಾನು ಸ್ವಜಾತಿ ಜನರ ಆದರದಿಂದ ವಂಚಿತನಾಗಿರುವೆನಲ್ಲ? ಹಿಂದೂಜನರಿಗೆ ದಯೆತೋರಿಸಿ ನನ್ನ ಶಕ್ತಿಯನ್ನು ಕಳಕೊಂಡೆನು. ಸ್ವಜಾತಿದ್ರೋಹಿಯಾದವನ ಗತಿಯು ನನ್ನಂತೆ ಅಲ್ಲವೇ?

ಅಶಮಾನಳು ಉತ್ತೇಜಿತ ಸ್ವರದಿಂದ:—ಪಠಾಣರು ಈ ಪ್ರಕಾರ ಮಾಡಿದ್ದು ಯೋಗ್ಯವೇನು? ಸಿಂಹಾಸನದ ನಿಜವಾದ ಹಕ್ಕುದಾರನು ನೀನು. ನೀನು ಹಿಂದೂಜನರ ಸಂಗಡ ಸಮತ್ವದಿಂದ ವರ್ತಿಸಿದ್ದು ನ್ಯಾಯವು. ನೀನು ನ್ಯಾಯಮಾರ್ಗದಿಂದ ನಡೆದು ಸ್ವಜಾತಿಯ ಸಹಾಯ ವಂಚಿತನಾಗಿರುವಿ ಇದು ನಿನಗೆ ಗೌರವವೆ? ಅಂದಬಳಿಕ ಏಕೆ ಹತಾಶನಾಗುವಿ? ಸಮಾಜವು ಕೃತಘ್ನವಾದರೂ ಸರ್ವಸಾಕ್ಷಿಯಾದ 'ಅಲ್ಲಾ'ನು ಇರುವನಷ್ಟೆ?

ಅಜಿಮ:—ನಾನು ದೇವರ ವಿಚಾರದಲ್ಲಿ ನಿರ್ದೋಷಿಯಾದರೂ ಈ ಅನ್ಯಾಯದ ಪ್ರತೀಕಾರ ಮಾಡುವದು ಹೇಗೆ?

ಅಶಮಾನ:—ಮುಸಲ್ಮಾನ ಸಮಾಜವು ನಮಗೆ ಸಹಾಯ ಮಾಡದಿದ್ದರೂ ಕೃತಜ್ಞ ಹಿಂದೂಸಮಾಜವು ನಮ್ಮನ್ನು ತಿರಸ್ಕರಿಸಲಿಕ್ಕಿಲ್ಲವಷ್ಟೇ? ಅಪ್ಪಾ, ನೀನು ಹಿಂದುಗಳ ಮೇಲೆ ಅವಿಶ್ವಾಸವನ್ನು ತಾಳಬೇಡ. ಈಗ ನಾವು ಭಾದುಡಿಯ ರಾಜಾ ಗಣೇಶ ನಾರಾಯಣ ಖಾನನ ಕಡೆಗೆ ಹೋಗೋಣ. ಅವನು ನ್ಯಾಯಪಕ್ಷಪಾತಿ ಇರುವನು. ಹಿಂದುಗಳೂ ಶೂರರಿರುವರು.

ಅಜಿಮನು ಸ್ವಲ್ಪಹೊತ್ತು ಯೋಚಿಸಿ:—ಹೌದು, ಈಗ ನಮಗೆ ಅನ್ಯಮಾರ್ಗವೇ ಇಲ್ಲ. ಹಾಗೇ ಮಾಡತಕ್ಕದ್ದು, ಎಂದನು.

ಅಂದಿನ ರಾತ್ರಿಯ ಕಡೆಯ ಪ್ರಹರವು; ಪೂರ್ವದಿಕ್ಕಿನಲ್ಲಿ ಕೆಂಪು

ಇನ್ನೂ ಹಿಡಿದಿದ್ದಿಲ್ಲ. ಇಂಥ ವೇಳೆಯಲ್ಲಿ ಅರಮನೆಯ ಗುಪ್ತಮಾರ್ಗದಿಂದ ಇಬ್ಬರು ಹೊರಬಿದ್ದು ನದಿಯಲ್ಲಿರುವ ಸಣ್ಣ ನೌಕೆಯನ್ನು ಪ್ರವೇಶಮಾಡಿದರು. ನೌಕೆಯು ಉತ್ತರದಿಂದ ಮುಂದಕ್ಕೆ ಸಾಗಿತು.

---

೩

ಗೌಡ ಬಾದಶಹನ ರಾಜಕುಟುಂಬದಲ್ಲಿ ಅಂತಃಕಲಹವು ಆರಂಭವಾದಾಗ ಹಿಂದೂ ಸರದಾರರಾದ ಭಾದುಡೀ ದುರ್ಗದ ರಾಜಾ ಗಣೇಶ ನಾರಾಯಣನಿಗೂ ಸಾನ್ಯಾಲ ಅಥವಾ ಸಾತೋಡದ ಅವನೀನಾಥನಿಗೂ ಕಲಹವು ಆರಂಭವಾಗಿತ್ತು. ಈ ಜಗಳದ ಮೂಲಕಾರಣವೆಂದರೆ, ಇವರಿಬ್ಬರ ರಾಜ್ಯದ ನಡುವೆ ಚಲನವಿಲನವೆಂಬದೊಂದು ವಿಸ್ತೀರ್ಣವಾದ ಸರೋವರವಿತ್ತು. ಆ ಸರೋವರದ ದಕ್ಷಿಣಕ್ಕೆ ಸಾತೋಡವೂ ಉತ್ತರಕ್ಕೆ ಭಾದುಡೀದುರ್ಗವೂ ಇದ್ದವು. ಈ ಸರೋವರದ ಸ್ವಾಮಿತ್ವವು ಈ ಇಬ್ಬರದು ಅಲ್ಲದಿದ್ದರೂ ಈ ವಿಷಯವಾಗಿ ಇಬ್ಬರಿಗೂ ಹಗಲೆಲ್ಲ ಜಗಳಗಳುಂಟಾಗುತ್ತಿದ್ದವು. ಆ ಸರೋವರದ ಮಧ್ಯದಲ್ಲಿ ಒಂದು ಸಣ್ಣ ನಡುಗಡ್ಡೆಯಿದ್ದು, ಅಲ್ಲಿ ರಾಮಚಾಂದ ಶಾಮಚಾಂದ ಎಂಬ ಇಬ್ಬರು ದರವಡೆಕೋರರು ವಾಸಮಾಡಿಕೊಂಡಿದ್ದರು. ಅವರು ಆ ಸರೋವರದಲ್ಲಿ ಆಡ್ಡಾಡುವ ಸಣ್ಣ ದೊಡ್ಡ ನೌಕೆಗಳನ್ನು ಲೂಟಿಮಾಡುತ್ತಿದ್ದರು. ಅವರ ಆ ಉಪಟಳಕ್ಕೆ ಭಾದುಡೀ-ಸಾತೋಡದ ಪ್ರಜೆಗಳು ಬೇಸತ್ತರು. ಕಡೆಗೆ ಸಾತೋಡದ ಅವನೀನಾಥನು ತಮ್ಮ ಕುಲಗುರುವಾದ ಕಾಲೀಕಿಶೋರ ಭಟ್ಟಾಚಾರ್ಯರಿಗೆ ಶರಣು ಹೋಗಿ ಅವರ ಮುಖಾಂತರ ರಾಮಚಾಂದ ಶಾಮಚಾಂದ ಈ ಇಬ್ಬರಿಗೂ ಸೈನ್ಯದಲ್ಲಿ ಅಧಿಕಾರಗಳನ್ನು ಕೊಟ್ಟು ಆ ಸರೋವರದ ಮೇಲೆ ತನ್ನ ಪ್ರಸ್ಥ ಬೆಳಸಿದನು. ಇದು ಗಣೇಶ ನಾರಾಯಣನಿಗೆ ಸಹನವಾಗದೆ ದೊಡ್ಡ ಸೈನ್ಯ ತಕ್ಕೊಂಡು ಆವನು ಸಾತೋಡ ದುರ್ಗವನ್ನು ಮುತ್ತಿದನು.

ಸಾತೋಡದ ಸೈನ್ಯದಲ್ಲಿ ಹಿಂದೂ ಸೈನ್ಯದ ಪ್ರಬಲವೂ ಭಾದುಡೀ ಸೈನ್ಯದಲ್ಲಿ ಮುಸಲ್ಮಾನರ ಪ್ರಬಲವೂ ವಿಶೇಷವಾಗಿತ್ತು. ಈ ಯುದ್ಧದಲ್ಲಿ ಅವನೀನಾಥನು ಸೋಲುವದು ನಿಶ್ಚಯವೆಂದು ಭಾವಿಸಿ, ಅವನ ಗುರುವಾದ ಕಾಲೀಕಿಶೋರನು ಈ ಯುದ್ಧವನ್ನು ನಿಂತಗೊಳಿಸುವ ಉಪಾಯವನ್ನು ಯೋಚಿಸಹತ್ತಿದನು.

\+ \+ \+ \+ \+ \+

ಸೂರ್ಯಾಸ್ತ ಸಮಯವು ಸಾತೋಡದುರ್ಗದ ಸಮೀಪದಲ್ಲಿ ಗಣೇಶ ನಾರಾಯಣನ ಸೈನ್ಯದ ಅಸಂಖ್ಯ ಶಿಬಿರಗಳಲ್ಲಿಯು ಸೈನಿಕರು ಯುದ್ಧೋತ್ಸಾಹದಿಂದ ತಮ್ಮ ತಮ್ಮ ಶಸ್ತ್ರಾಸ್ತ್ರಗಳನ್ನು ಸಜ್ಜುಗೊಳಿಸುತ್ತ ರಾತ್ರಿಯ ಹಾದಿ ನೋಡುತ್ತಿದ್ದರು. ರಾಜನ ಶಿಬಿರದಲ್ಲಿ ಎಲ್ಲ ಸೇನಾಪತಿಗಳು ಕೂಡಿ ಮಂತ್ರಾಲೋಚನೆ ನಡಿಸಿದ್ದರು. ಇಂಥ ವೇಳೆಯಲ್ಲಿ ಮೈಮೇಲೆ ಶುಭ್ರ ದೇಶೀ ವಸ್ತ್ರಗಳನ್ನೂ ಭಸ್ಮ ರುದ್ರಾಕ್ಷಿಯ ಮಾಲೆಗಳನ್ನೂ ಧರಿಸಿದ ಒಬ್ಬ ತೇಜಸ್ವಿಯಾದ ಬ್ರಾಹ್ಮಣನು ಗಣೇಶ ನಾರಾಯಣನ ಶಿಬಿರದ ಮುಂದೆ ಬಂದು ನಿಂತನು. ದ್ವಾರಪಾಲಕರು ಎದ್ದು ನಿಂತು ಒಳಗೆ ಹೋಗಲು ಮಾರ್ಗಕೊಟ್ಟರು ಇವನನ್ನು ನೋಡಿದ ಕೂಡಲೆ ರಾಜನು:-ಬರಬೇಕು, ಕಾಲಿಕಿಶೋರಭಟ್ಟಾಚಾರ್ಯರು ಬರಬೇಕು. ಈ ಆಸನವನ್ನು ಸ್ವೀಕರಿಸಬೇಕು ಎಲ್ಲವೂ ಕುಶಲವಷ್ಟೇ? ತಾವು ಆಗಮಿಸಿದ ಕಾರ್ಯವಾವುದು? ಎಂದು ಪ್ರಶ್ನೆ ಮಾಡಿದನು.

ಕಾಲಿಕಿಶೋರ:—ರಾಜಾ, ನಿಮ್ಮಂಥ ತಿಳಿದವರೇ ಈ ಪ್ರಕಾರ ಅದೂರದರ್ಶಿತನದಿಂದ ನಡೆಯಹತ್ತಿದಮೇಲೆ ಕುಶಲವೆಲ್ಲಿಯದು? ನೀನು ಹೂಡಿದ ಯುದ್ಧದ ಪರಿಣಾಮದ ಬಗ್ಗೆ ವಿಚಾರ ಮಾಡಿರುವೆಯಾ? ಗೌಡದಲ್ಲಿ ಹಿಂದುಗಳಿಗೆ ಗೌರವವೇ ಇಲ್ಲ ನೀವಿಬ್ಬರು ಇರುವದರಿಂದ ಹಿಂದುಗಳಿಗೆ ಇಲ್ಲಿ ಸ್ವಲ್ಪ ಮಾನ ಸಿಗುವದು ನೀವೇ ಹೀಗೆ ಆತ್ಮಕಲಹದಿಂದ ನಿರ್ವೀರ್ಯರಾದರೆ ಹಿಂದುಗಳು ನಾಮಶೇಷರಾದರೆಂದೇ ತಿಳಿಯಬೇಕು! ಅಂತೂ ಹಿಂದೂವರ್ಗದ ಸ್ಥಿತಿಯು ನೆಟ್ಟಗೆ ಕಾಣುವದಿಲ್ಲ

ಗಣೇಶ:—ಗುರುವರ, ಇದರಲ್ಲಿ ನನ್ನ ಅಪರಾಧವೇನು? ನೀವೇ ವಿಚಾರ ಮಾಡಿರಿ

ಕಾಲಿಕಿಶೋರ:—ರಾಜಾ, ಸದ್ಯಕ್ಕೆ ಗೌಡ ದರಬಾರದ ಸ್ಥಿತಿಯು ಹೇಗಿದೆ ಎಂಬುದು ನಿನಗೆ ಗೊತ್ತೇ ಇರುವದು. ಹೆಚ್ಚಿಗೆ ಏನು ಹೇಳಲಿ? ನಾನು ನ್ಯಾಯಾನ್ಯಾಯದ ನಿರ್ಣಯ ಮಾಡಲಿಕ್ಕೆ ಬಂದಿಲ್ಲ

ಗಣೇಶ:—ನಾನಂತೂ ಜಲಾಲನ ಬಲದ ಅರ್ಧ ಭಾಗ ತೆಗೆದುಕೊಳ್ಳುವವರೆಗೆ ಹಿಂದಿರುಗೆನೆಂದು ಪ್ರತಿಜ್ಞೆ ಮಾಡಿ ಹೊರಟಿರುವೆನು.

ಕಾಲಿಕಿಶೋರ:—ನಿನ್ನ ಅಪೇಕ್ಷೆಯು ಇಷ್ಟೇ ಇರುವದಲ್ಲವೆ? ಹಾಗಾದರೆ ನಾನು ಸಾತೋಡ ಹಾಗೂ ಭಾದುಡೀ ಮನೆತನಗಳನ್ನು ಸಾಮಾನ್ಯ

ಕಾರಣಗಳಿಂದ ಭಿನ್ನವಾಗದಂಥ ಪ್ರೇಮದಿಂದ ಬಂಧಿಸಬೇಕೆಂದು ಮಾಡಿರುವೆನು. ಇದರಿಂದ ನಿಮ್ಮ ಇಚ್ಛೆಯು ಪೂರ್ಣವಾಗುವದು; ಜನರ ಕಲ್ಯಾಣವೂ ಆಗುವದು.

ಗಣೇಶ:—ನಾನು ತಮ್ಮ ಆಜ್ಞೆಗೆ ಬೇರೆ ಇಲ್ಲ.

ರಾಜತಂತ್ರಪಟುವಾದ ಕಾಲೀಕಿಶೋರನು ಹಾಗೆಯೇ ಅವನೀನಾಥನ ಹತ್ತರಬಂದು ಅವನಿಗೆ ಉಪದೇಶಮಾಡಿ ಅವನ ಮಗಳಾದ ನವಕಿಶೋರಿಯನ್ನು ಗಣೇಶನಾರಾಯಣನ ಮಗನಾದ ಯದುನಾರಾಯಣನಿಗೆ ಕೊಡುವದನ್ನು ನಿಶ್ಚಯಮಾಡಿದನು.

ಎರಡೂ ಸೈನ್ಯಗಳಲ್ಲಿ ರಣಭೇರಿಯ ಬದಲಾಗಿ ಮಂಗಳವಾದ್ಯಗಳು ಬಾರಿಸತೊಡಗಿದವು. ಯಾವ ಸ್ಥಳದಲ್ಲಿ ಶಸ್ತ್ರಗಳ ಝಣತ್ಕಾರವು ಕೇಳತಕ್ಕದ್ದೋ, ಅಲ್ಲಿ ವಧೂವರರ ಆಶೀರ್ವಾದಪರ ಮಂಗಳವೇದಘೋಷವು ಕೇಳಹತ್ತಿತು. ಇದಕ್ಕೆ ದೇವರ ಲೀಲೆಯನ್ನಬೇಕು! ಎಲ್ಲ ಅಸ್ತ್ರಕಲಹಗಳ ಪರ್ಯವಸಾನವೂ ಈ ರೀತಿಯಲ್ಲಿ ಆದರೆ, ಸುವರ್ಣಭೂಮಿಯಾದ ಹಿಂದೂಪುತ್ರರಿಗೆ ಒಂದು ತುತ್ತು ಅನ್ನಕ್ಕೆ ಅನ್ಯರ ಮುಖ ನೋಡುವ ಪ್ರಸಂಗ ಬರುತ್ತಿದ್ದಿಲ್ಲ! ದುರಾಕಾಂಕ್ಷಿಯಾದ ಮಾನವನು ಜೀವಕ್ಕೆ ಬದಲಾಗಿ ವಿಜಯವನ್ನು ಅಪೇಕ್ಷಿಸುವಂತೆ, ಪ್ರೇಮದ ವಿನಿಮಯದಿಂದ ವಿಜಯವನ್ನೇಕೆ ಬಯಸಬಾರದು? ವರದಕ್ಷಿಣೆಯಾಗಿ ಅವನೀನಾಥನು ಚಲನವಿಲ್ಲದೆ ಅರ್ಧಭಾಗವನ್ನು ಅಳಿಯನಿಗೆ ಕೊಟ್ಟುಬಿಟ್ಟನು.

———

೪

ಗಣೇಶನಾರಾಯಣನು ಸೊಸೆಯನ್ನು ಕರೆದುಕೊಂಡು ವಿಜಯಶ್ರೀಯ ಆನಂದದಿಂದ ತಿರುಗಿಬಂದನು. ಅವನ ಪತ್ನಿಯಾದ ತ್ರಿಪುರಾದೇವಿಯು ಪುತ್ರವಧುವನ್ನು ಆದರದಿಂದ ಎದುರುಗೊಂಡು ಕರಕೊಂಡು ಹೋದಳು.

ಶೀರ್ಣಲತೆಯು ವರ್ಷಕಾಲದ ಜಲಸೇಚನದಿಂದ ನೂತನ ಪಲ್ಲವಗಳನ್ನು ಧರಿಸುವಂತೆ ವಿವಾಹದ ಸುರುಗೆಯ ನೀರಿನಿಂದ ಕಿಶೋರಿಯು ದಿನದಿನಕ್ಕೆ ಬೆಳೆಯಹತ್ತಿದಳು.

ಗಣೇಶನಾರಾಯಣನು ವಿಶೇಷವಾಗಿ ಮುಸಲ್ಮಾನ ದರಬಾರದಲ್ಲಿದ್ದರೂ ತನ್ನ ಆಚಾರವಿಚಾರಗಳನ್ನು ಬಿಟ್ಟಿದ್ದಿಲ್ಲ. ತನ್ನ ಹೆಂಡತಿಯು

ವ್ರತ-ಉಪವಾಸಗಳಿಗೆ ಬೇಕಾದ ಸಹಾಯವನ್ನು ಆದರದಿಂದ ಮಾಡು ತ್ತಿದ್ದನು. ತ್ರಿಪುರಾ ರಾಣಿಯ ಮುಖದ ಮೇಲೆ ಸಾಧ್ವಿಯ ತೇಜಸ್ಸು ಉಕ್ಕುತ್ತಿತ್ತು. ಇಂಥ ಗುರುವಿನ ಕೈಯಲ್ಲಿ ಕಿಶೋರಿಯ ಶಿಷ್ಯತ್ವವು!

ರಾತ್ರಿಯ ಎರಡನೇ ಪ್ರಹರದ ಅಂತಿಮ ಸಮಯವು. ಭಾದುಡೀ ದುರ್ಗದಲ್ಲಿ ಗಭೀರವಾದ ಶಾಂತಿ ಸಾಮ್ರಾಜ್ಯವು. ಸರ್ವಸಾಧಾರಣವಾಗಿ ಜನರೂ ನಿದ್ರಾಂಗನೆಯ ಪಾಶದಲ್ಲಿ ಬದ್ಧರು. ಈ ವೇಳೆಯಲ್ಲಿ ಅರಮನೆ ಯ ಯದುನಾರಾಯನ ಶಯನ್ಯಾಗೃಹದಲ್ಲಿ ದೀಪವು ಪೂರ್ಣಪ್ರಕಾಶದಿಂದ ಪ್ರಜ್ವಲಿಸುತ್ತಿತ್ತು. ಕೋಣೆಯು ಸರ್ವಾಂಗಸುಂದರವು ಮಧ್ಯದಲ್ಲಿರುವ ಪಲ್ಲಂಗದ ಮೇಲೆ ಯದುನಾರಾಯನು ಚಾತಕ ಪಕ್ಷಿಯಂತೆ ಬಾಗಿಲ ಕಡೆಗೆ ನೋಡುತ್ತ ಒಂದು ಮಗ್ಗಲಿನಿಂದ ಮತ್ತೊಂದು ಮಗ್ಗಲಿಗೆ ಹೊರ ಳಾಡುತ್ತಿದ್ದನು; ಮತ್ತು ಅಸ್ಫುಟಸ್ವರದಿಂದ:—"ರಾತ್ರಿಯು ಬಹಳ ವಾಗಿದೆ. ಕಿಶೋರಿಯು ಯಾಕೆ ಬಂದಿರಲಿಕ್ಕಿಲ್ಲವೋ" ಎಂದು ಅನ್ನುವನು. ಅಷ್ಟ ರಲ್ಲಿ ನೂಪುರಗಳ ಇಂಪಾದ ಧ್ವನಿಯು ಕೇಳ ಬರಲು, ಮುಖದ ಮೇಲೆ ಜರದ ಶಲ್ಲೆಯನ್ನು ಎಳೆದುಕೊಂಡು ನಿದ್ದೆ ಹತ್ತಿದವನಂತೆ ಮಲಗಿದನು.

ನವಕಿಶೋರಿಯು ಮುಂದಗೆತಿಯಿಂದ ಕೋಣೆಯಲ್ಲಿ ಬಂದು ಸಪ್ಪಳ ಮಾಡದಂತೆ ಬಾಗಿಲನ್ನು ಮುಚ್ಚಿಕೊಂಡು, ಪಲ್ಲಂಗದ ಮಗ್ಗಲಿಗೆ ನಿಂತು ಬೀಸಣಿಕೆಯಿಂದ ಗಾಳಿಯನ್ನು ಬೀಸಹತ್ತಿದಳು. ಯದುನಾರಾಯಣನು ನಿದ್ದೆಯಿಂದ ಎಚ್ಚತ್ತವನಂತೆ ಆಕಳಿಸುತ್ತ:-ಇನ್ನೂ ಮಲಗಿಲ್ಲವೇನು? ರಾತ್ರಿ ಯು ಬಹಳವಾಗಿರಬಹುದು, ಎಂದನು.

ಕಿಶೋರಿ:—ನಾನು ಇದೇ ಬಂದಿರುವೆನು.

ಯದು:-ದ್ವಿತೀಯೆಯ ಚಂದ್ರಮನು ಅಷ್ಟಮಿಯ ಕಾಲಕ್ಕೆ ಬರಲು ಕಾರಣವೇನು? ಎಂದನು

ಕಿಶೋರಿ:-ನಾನು ದಿನದಂತೆ ಅತ್ತೆಯವರ ಸೇವೆಮಾಡಿಕೊಂಡು ರಾಮಾಯಣದ ಕೆಲವು ಭಾಗವನ್ನು ಓದಿ ಬರುತ್ತಿದ್ದೆನು; ಆದರೆ ಅತ್ತೆ ಯವರು ಇಂದಿನ ಕಥೆಯು ಹೃದಯದ್ರಾವಕವಿದೆ. ಇನ್ನೊಮ್ಮೆ ಓದು, ಎಂದರು. ಓದಿದೆನು. ಅದಕ್ಕೆ ತಡವಾಯಿತು.

ಯದು:-ಇಂದು ಓದಿದ್ದರಲ್ಲಿಯ ವಿಷಯವೇನು?

ಕಿಶೋರಿ:—ಪೂರ್ಣ ಗರ್ಭಿಣಿಯಾದ ಸೀತಾದೇವಿಯನ್ನು ರಾಮ

ಚಂದ್ರನ ಕಠೋರ ಆಜ್ಞೆಯಂತೆ ಲಕ್ಷ್ಮಣನು ವನದಲ್ಲಿ ಬಿಟ್ಟುಬಂದ ಭಾಗವು.

ಯದು:—ರಾಮಾಯಣವನ್ನು ಬರೆದ ವಾಲ್ಮೀಕಿ ಮುನಿಯು ಸ್ತ್ರೀಯರ ಪಕ್ಷಪಾತಿ ಎಂದು ತೋರುತ್ತದೆ ಅಂತೇ ಅವರ ಬಗ್ಗೆ ಹೆಚ್ಚು ಆದರ್ಶ ತೋರಿಸಿರುವನು.

ಕಿಶೋರಿ:—ಪುರುಷರ ಹೃದಯವು ಸ್ತ್ರೀಯರಷ್ಟು ಕೋಮಲವಲ್ಲ. ಅಂತೇ ಹಿಮ್ಮೆ ಸತ್ವ ಪರೀಕ್ಷೆಮಾಡಿದ ಸೀತಾದೇವಿಯನ್ನು ಪುನಃ ಒಬ್ಬ ಸಾಮಾನ್ಯಮನುಷ್ಯನ ಮಾತಿನಿಂದ ಶ್ರೀರಾಮನು ತ್ಯಾಗಮಾಡಿದನು.

ಯದು:—ಕಿಶೋರಿ, ನೋಡು; ಅದೇ ಸೀತಾದೇವಿಯನ್ನು ರಾವಣನ ಕೈಯ್ಯಿಂದ ಬಿಡಿಸಿಕೊಂಡು ಬರಲಿಕ್ಕೆ ಶ್ರೀರಾಮನು ಎಷ್ಟು ಪ್ರಯತ್ನ ಪಟ್ಟನು? ಅದು ಅವನ ಪತ್ನೀವಾತ್ಸಲ್ಯವನ್ನು ವ್ಯಕ್ತಮಾಡುವದಲ್ಲವೆ? ಇನ್ನು ಅವನು ೨ನೇಸಾರೆ ತ್ಯಾಗಮಾಡಿದ್ದು ಅವನ ಪ್ರಜಾವಾತ್ಸಲ್ಯವನ್ನು ವ್ಯಕ್ತಮಾಡುತ್ತದೆ ಜಗತ್ತಿನಲ್ಲಿಯ ಯಾವ ರಾಜನು ಪ್ರಜೆಗಳ ಸಲುವಾಗಿ ಇಂಥ ತ್ಯಾಗವನ್ನುಮಾಡಿರುವನು? ಇನ್ನು ಸೀತಾದೇವಿಯಾದರೂ ಪಾತಾಳ ಪ್ರವೇಶ ಮಾಡಿ ನಿಷ್ಠುರತನವನ್ನು ತೋರಿಸಿಲ್ಲವೆ?

ಕಿಶೋರಿ:—ಹಿಮ್ಮೆ ಪರೀಕ್ಷಿಸಿದರೆ ಪುರುಷರಿಗೆ ತೃಪ್ತಿಯಾಗಬಾರದೇನು? ಚೊಕ್ಕಚಿನ್ನವನ್ನು ಎಷ್ಟು ಸಾರೆ ಪರೀಕ್ಷಿಸಬೇಕು?

ಯದು:—ಚಿನ್ನವು ಚೊಕ್ಕವಾಗಿದ್ದರೆ ಮತ್ತೆಮತ್ತೆ ಪರೀಕ್ಷಿಸಿದರೆ ಅದಕ್ಕೆ ಕುಂದು ಬರುವದಿಲ್ಲವಷ್ಟೇ?

ಕಿಶೋರಿ:—ಅದು ಬೆಂಕಿಯಲ್ಲಿ ಬಿದ್ದು ಕಾಯುವ ಕಷ್ಟವನ್ನೂ ಅಕ್ಕಸಾಲಿಗನ ಹೊಡತವನ್ನೂ ಅನುಭವಿಸಬೇಕಷ್ಟೇ? ಈ ಕಷ್ಟಕ್ಕೆ ಬೇಸತ್ತು ಸೀತಾದೇವಿಯು ಕಡೆಗೆ ತಾಯಿಯ ಗರ್ಭವನ್ನು ಸೇರಿದಳು. ನಾನು ಸಹ ಜನ್ಮಜನ್ಮಾಂತರದಲ್ಲಿ ಸೀತಾದೇವಿಯಂಥ ಆದರ್ಶಗುಣವನ್ನು ಕೊಡೆಂದು ಬೇಡುವೆನು.

ಯದು:—ನಾನೂ ರಾಮಚಂದ್ರನಂಥ ಕರ್ತವ್ಯನಿಷ್ಠೆಯನ್ನು ಕೊಡೆಂದು ಬೇಡಿಕೊಳ್ಳುವೆನು; ಆದರೆ ನೀನು ಮಾತ್ರ ವಿಚಾರ ಮಾಡು. ಸೀತಾದೇವಿಯು ಚಿರದುಃಖಿನಿಯು!!

ಕಿಶೋರಿ:—ಸತ್ವರಕ್ಷಣೆಯ ಸಲುವಾಗಿ ಎಂಥ ಕಷ್ಟ ಸೋಸುವ

ಪ್ರಸಂಗ ಬಂದರೂ ನಾನು ಹೆದರುವವಳಲ್ಲ. ಎಂಥ ಕಷ್ಟಗಳನ್ನಾದರೂ ಅನುಭವಿಸುವೆನು!

ಯದು:—ಶ್ರೀರಾಮನಂತೆ ಪ್ರಜಾರಂಜನವೇ ಮುಖ್ಯ ಧ್ಯೇಯವಾಗಿಟ್ಟುಕೊಂಡು ಎಂಥ ತ್ಯಾಗವನ್ನಾದರೂ ಮಾಡಲು ನಾನು ಸಿದ್ಧನಿರುವೆನು.

ಯದುನಾರಾಯಣನ ಮಾತು ಮುಗಿಯುವದರಲ್ಲಿ ಎಡಗಡೆಗೆ ಒಂದು ಹಲ್ಲಿಯು ಚುಕ್ ಚುಕ್ ಎಂದು ನುಡಿಯಿತು. ಇಬ್ಬರ ಹೃದಯದಲ್ಲಿಯೂ ಒಂದು ಬಗೆಯ ದುಷ್ಟ ಕಲ್ಪನೆಯು ತಲೆದೋರಿತು. ಇಬ್ಬರ ಮನಸ್ಸುಗಳೂ ಚಂಚಲವಾದವು.

---

## ೩

ಒಂದು ಪ್ರಾತಃಕಾಲದಲ್ಲಿ ಭಾದುಡೀ ದುರ್ಗದೊಳಗಿನ ಎಲ್ಲ ಪುರುಷರೂ ಅರಮನೆಯ ಕಡೆಗೆ ನಡೆದಿದ್ದರು. ರಾಜಾ ಗಣೇಶ ನಾರಾಯಣನು ಆದು ಸಭೆಯನ್ನು ಕೂಡಿಸಿ ಎಲ್ಲರೂ ಬರುವಂತೆ ಆಜ್ಞಾಪಿಸಿದ್ದನು. ಸಭಾಮಂಟಪದ ಮಧ್ಯಭಾಗದಲ್ಲಿ ಒಂದು ಬೆಳ್ಳಿಯ ಸಿಂಹಾಸನವು. ಅದರ ಹತ್ತರ ಅದಕ್ಕಿಂತ ಸ್ವಲ್ಪ ಸಣ್ಣ ಆಸನವು ಅದರ ಎಡಭಾಗದಲ್ಲಿಯೂ ಅಂಥದೇ ಮತ್ತೊಂದು ಆಸನವು. ಮುಖ್ಯ ಗದ್ದುಗೆಯ ಒಂದು ಕಡೆಗೆ ಮುಸಲ್ಮಾನ ಮಂತ್ರಿಗಳು, ಮತ್ತೊಂದು ಕಡೆಗೆ ಹಿಂದೂ ಮಂತ್ರಿಗಳು ಕೂಡ್ರತಕ್ಕ ಪರಿಪಾಠವು.

ನಡುವಿನ ಆಸನದ ಮೇಲೆ ರಾಜಾಗಣೇಶ ನಾರಾಯಣನು ವಿರಾಜಮಾನನಾದನು. ಎಡಕ್ಕೆ ಬೀಗನಾದ ಅವನೀನಾಥನೂ ಬಲಕ್ಕೆ ಪುತ್ರ ಯುವರಾಜ ಯದುನಾರಾಯಣನೂ ಕುಳಿತಿದ್ದರು. ಉಳಿದ ಮಂತ್ರಿಗಳೂ ಸೇನಾಪತಿಗಳೂ ಪ್ರಜೆಗಳೂ ತಮ್ಮ-ತಮ್ಮ ಯೋಗ್ಯ ಸ್ಥಳಗಳಲ್ಲಿ ವಿಶ್ರಮಿಸಿದ್ದರು.

ವಂಗಸಾಮ್ರಾಟನಾದ ಸೈಫುದ್ದೀನನು ಮರಣಹೊಂದಿದ್ದು, ಅವನ ಹಿರೇ ಮಗನಾದ ನಸೆರಿತ್‌ನು ಶಮಸುದ್ದೀನ ಎಂಬ ಹೆಸರಿನಿಂದ ಬಾದಶಹನಾಗಿದ್ದನು. ಸಣ್ಣವನಾದ ಅಜಿಮನು ಗೌಡನಗರಿಯಿಂದ ಹೊರಗೆ ಬಂದು ಸಿಂಹಾಸನದ ನಿಜವಾದ ಹಕ್ಕುದಾರನು ತಾನೇ ಎಂದು ಯುದ್ಧದ ಸಲುವಾಗಿ ಸೈನ್ಯ ಸಂಗ್ರಹ ಮಾಡಹತ್ತಿದನು; ಆದರೆ ಅಜಿಮನು ಬಾದ

ಶಕನಾದರೆ ಹಿಂದೂ ಮುಸಲ್ಮಾನರನ್ನು ಸರಿಯಾಗಿ ನಡಿಸಿಕೊಳ್ಳುವನು. ಗೆದ್ದವರು ಸೋತವರು ಎಂಬ ಭೇದ ಉಳಿಯುವದಿಲ್ಲ. ನಸೋತ್‌ನು ನ್ಯಾಯದಿಂದ ಪಟ್ಟಕ್ಕೆ ಬಾಧ್ಯಸ್ಥನಲ್ಲದಿದ್ದರೂ ಅವನು ಹಿಂದೂ ದ್ವೇಷಿಯಾಗಿರುವದರಿಂದ ಮುಸಲ್ಮಾನರ ಗೌರವಕ್ಕೆ ಕುಂದು ಬರುವದಿಲ್ಲವೆಂದು ಭಾವಿಸಿ ಮುಸಲ್ಮಾನ ಸಮಾಜದವರು ನಸೋತ್‌ನ ಪಕ್ಷವಹಿಸಿದ್ದರು. ಅದರಿಂದ ಅಜಿಮನು ಹಿಂದೂಜನರ ಆಶ್ರಯ ಬಯಸಿದನು; ಆದರೆ ಮುಸಲ್ಮಾನರ ಸಂಗಡ ಪ್ರಕಾಶ್ಯವಾಗಿ ದ್ವೇಷವನ್ನು ತಾಳಿ ಅಜಿಮನಿಗೆ ಸಹಾಯ ಮಾಡುವಷ್ಟು ಸಾಮರ್ಥ್ಯವುಳ್ಳ ಹಿಂದುಗಳು ಎಲ್ಲಿ ದೊರೆಯಬೇಕು? ಹಿಂದುವೇಳೆ ಸಹಾಯ ಮಾಡಿದರೆ ಅಜಿಮನು ಸೋತಪಕ್ಷದಲ್ಲಿ ಹಿಂದುಗಳ ದುರ್ದೆಶೆಗೆ ಪಾರವೇ ಇಲ್ಲವೆಂದು ಹಿಂದುಗಳು ಕಲ್ಪಿಸಿದ್ದಲ್ಲಿ ಅಯಥಾರ್ಥವೇನು? ಹೀಗಾಗಿ ಅಜಿಮನಿಗೆ ತಕ್ಕಷ್ಟು ಸಹಾಯವು ದೊರೆಯಲಿಲ್ಲ. ಅಜೀಮನು ಮುಖ್ಯವಾಗಿ ರಾಜಾಗಣೇಶ ನಾರಾಯಣನನ್ನು ನಂಬಿದ್ದನು; ಮತ್ತು ಅವನು ವಿನಯಪೂರ್ವಕವಾಗಿ ಸಹಾಯವನ್ನು ಅಪೇಕ್ಷಿಸಿ ರಾಜನ ಕಡೆಗೆ ದೂತನನ್ನೂ ಕಳುಹಿಸಿದ್ದನು. ಇಂದಿನ ಸಭೆಯ ಉದ್ದೇಶವು ಈ ಸಲುವಾಗಿಯೇ ಆಗಿತ್ತು. ರಾಜಾಗಣೇಶ ನಾರಾಯಣನೂ ಚಿಂತೆಗೊಳಗಾಗಿದ್ದನು ನಸೋತ್‌ನು ಪ್ರಬಲನು; ಅಜಿಮನು ದುರ್ಬಲನು. ದುರ್ಬಲರಿಗೆ ಸಹಾಯ ಮಾಡುವದೇ ಕ್ಷತ್ರಿಯರ ಕರ್ತವ್ಯವು! ಆದರೆ ಪ್ರಸಂಗವಿಶೇಷದಲ್ಲಿ ರಾಜನೀತಿಯು ಇದಕ್ಕೆ ಒಪ್ಪಿಗೆಯನ್ನು ಕೊಡುವದಿಲ್ಲ. ಮಾಡುವ ಕಾರ್ಯವು ಸಫಲವಾಗಬೇಕಲ್ಲದೆ ಎಲ್ಲ ಆತ್ಮಪ್ರತಿಷ್ಠೆಗೆ ಕುಂದು ಬರುವದಿಲ್ಲವೋ, ಆ ಪಕ್ಷ ವಹಿಸುವದು ಶ್ರೇಯಸ್ಕರವು. ರಾಜನು ಕಡೆಗೆ ಪ್ರತಿಯೊಬ್ಬ ಮಂತ್ರಿಗಳ ಅಭಿಪ್ರಾಯವನ್ನು ಕೇಳಿದನು.

ವೃದ್ಧ ಸಚಿವ ಇಬ್ರಾಹಿಮಖಾನನು ಎದ್ದುನಿಂತು:—ನನ್ನ ಅಭಿಪ್ರಾಯವು ಈ ಪ್ರಸಂಗದಲ್ಲಿ ಮಹಾರಾಜರು ಯಾವ ಪಕ್ಷವನ್ನೂ ವಹಿಸಬಾರದು. ನಮ್ಮ ರಾಜ್ಯದಲ್ಲಿ ಹಿಂದೂ ಮುಸಲ್ಮಾನರನ್ನು ಸರಿಯಾಗಿ ನಡಿಸಿಕೊಳ್ಳುತ್ತಿದ್ದು, ಉಳಿದ ದೇಶದವರಂತೆ ಇಲ್ಲಿ ದ್ವೇಷಭಾವವಿಲ್ಲ. ಈಗ ನಾವು ಯಾವದೇ ಪಕ್ಷ ವಹಿಸಿದರೆ ಜಾತಿದ್ವೇಷವು ಹುಟ್ಟುವ ಸಂಭವವಿರುವದು. ಇದಲ್ಲದೆ ಗೌಡ ದರಬಾರದಲ್ಲಿರುವ ನಮ್ಮ ಗೌರವಕ್ಕೆ ಯಾವ ಪಕ್ಷ ವಹಿಸಿದರೂ ಕುಂದು ಬರುವಂತೆ ಇರುವದು; ಮತ್ತು

ನಾವು ವಹಿಸಿದ ಪಕ್ಷವು ಸೋತರೆ ವಿಜಯುವನ್ನು ಹೊಂದಿದ ಪಕ್ಷದ ರೋಷಾಗ್ನಿಗೆ ಗುರಿಯಾಗಬೇಕಾಗುವದು, ಎಂದೆಂದು ಕುಳಿತನು.

ಮತ್ತೊಬ್ಬ ವೃದ್ಧ ಮಂತ್ರಿಯಾದ ವಜೀರಖಾನನು ಎದ್ದು ನಿಂತು:- ಸದ್ಯದ ಪರಿಸ್ಥಿತಿಯನ್ನು ವಿಚಾರ ಮಾಡಿದರೆ ನಾವು ತಟಸ್ಥ ವೃತ್ತಿಯಿಂದ ಇರಲು ಶಕ್ಯತೋರುವದಿಲ್ಲ. ಇಂದು ಅಜೀಮನು ಸಹಾಯ ಬೇಡಿರುವನು. ನಾಳೆ ನಸರಿತ್‌ಕಹನೂ ಸಹಾಯ ಬೇಡುವನು. ಮಹಾರಾಜರ ಸಾಮರ್ಥ್ಯವು ಉಭಯತರಿಗೆ ಗೊತ್ತಿರುವದು ನೀವು ವಹಿಸಿದ ಪಕ್ಷಕ್ಕೇ ವಿಜಯದ ಆಶೆಯು ಇಬ್ಬರೂ ತಮ್ಮ ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸುವರು ಅಂದಬಳಿಕ ಯಾವ ಪಕ್ಷವನ್ನು ಅವಲಂಬಿಸತಕ್ಕದ್ದೆಂಬದನ್ನು ಈಗಲೆ ನಿರ್ಧರಿಸಬೇಕು, ಎಂದು ಹೇಳಿದನು.

ಹಿಂದೂ ಮಂತ್ರಿಯಾದ ಮೃತ್ಯುಂಜಯ ನ್ಯಾಯವಾಗೀಶನು ಎದ್ದು ನಿಂತು:—"ಸದ್ಯಕ್ಕೆ ಅಜೆಮನು ರಾಜ್ಯಕಳಕೊಂಡು ಓಡಿ ಬಂದಿರುವನು. ಇದಲ್ಲದೆ ಅವನ ಜಾತಿಬಾಂಧವರಾದ ಮುಸಲ್ಮಾನರು ಕೂಡ ಅವನಿಗೆ ವಿರುದ್ಧರು. ಇನ್ನು ಹಿಂದುಗಳಾದರೂ ಎಷ್ಟು ಮಂದಿ ಅವನಿಗೆ ಸಹಾಯ ಮಾಡುವರು? ಹಿಂದುಗಳಿಗೆ ಮೊದಲೇ ಬಲವಿಲ್ಲ. ಅದರಲ್ಲಿ ಇಂಥ ದುಸ್ಸಾಹಸವನ್ನು ಮಾಡಿ ಮತ್ತೆ ಇದ್ದ ಗೌರವವನ್ನು ಸಹ ಕಳಕೊಳ್ಳಬೇಕಾದೀತು. ಇನ್ನು ನಸರಿತ್‌ನು ಬಲವಾನನು. ಸಿಂಹಾಸನವು ಅವನ ಸ್ವವಶವು. ಕಾರಣ ಬಲವಾನನ ಪಕ್ಷ ವಹಿಸಿ ಇದ್ದ ಗೌರವವನ್ನು ಕಾಯ್ದುಕೊಳ್ಳುವದು ರಾಜನೀತಿಯು. ಕಾರಣ ನಸರಿತನ ಪಕ್ಷವನ್ನೇ ಸ್ವೀಕರಿಸಬೇಕು. ಇಲ್ಲದಿದ್ದರೆ ಸಾತೋಡದಂತೆ ಭಾದುಡಿಯೂ ಗೌಡದರ್ಬಾರದಲ್ಲಿಯ ಗೌರವವನ್ನು ಕಳಕೊಳ್ಳಬೇಕಾದೀತು!

ಕಡೆಯ ಮಾತುಗಳು ಆ ಸಾತೋಡದ ರಾಜನಾದ ಅವನೀನಾಥನ ಮನಸ್ಸಿಗೆ ಹತ್ತಿದವು. ಅವನು ಎದ್ದು ನಿಂತು ಗಂಭೀರಭಾವದಿಂದ:— ಸಾತೋಡವು ಗೌಡಬಾದಶಹನಿಂದ ಕೊಡುವ ಗೌರವವನ್ನು ಚಿರಕಾಲ ಶ್ರೇಷ್ಠವೆಂದು ಭಾವಿಸುವದಿಲ್ಲ; ಮತ್ತು ನ್ಯಾಯವಾದ ತನ್ನ ಗೌರವವನ್ನು ಕಳಕೊಳ್ಳುವದಿಲ್ಲ. ಇನ್ನು ಸದ್ಯದ ವಿಷಯದಬಗ್ಗೆ ನನ್ನ ಅಭಿಪ್ರಾಯವೇನೆಂದರೆ:—ನನ್ನ ವಿಚಾರದಂತೆ ಮಹಾರಾಜರು ಈಗ ಯಾವ ಪಕ್ಷವನ್ನೂ ಗ್ರಹಿಸಬಾರದು; ಮುಸಲ್ಮಾನ-ಮುಸಲ್ಮಾನರ ಬಡಿದಾಟ

ಶಹಾಜಾದ-ಶಹಾಜಾದಾರ ಬಡಿದಾಟ. ಅಂದಬಳಿಕ ನಾವು ಅದರಲ್ಲಿ ಸೇರುವ ಕಾರಣವಾದರೂ ಏನು? ಅವರು ತಮ್ಮ ತಮ್ಮೊಳಗೆ ಬಡಿದಾಡಿ, ತಮ್ಮ ಬಲ ಕಳೆದುಕೊಳ್ಳುವದು ನಮಗೇ ಹಿತವು. ನಾವು ಮಾತ್ರ ನಮ್ಮ ಬಲ ಕಳೆದುಕೊಳ್ಳಬಾರದು. ಆತ್ಮಕಲಹದಿಂದ ಅವರು ಹತವೀರ್ಯರಾದ ಸಂಧಿಯನ್ನು ಸಾಧಿಸಿ, ನಾವು ಕಳೆದುಕೊಂಡ ಕೀರ್ತಿಯನ್ನು ತಿರುಗಿ ಪಡೆಯಬೇಕು. ಮುಸಲ್ಮಾನರು ಹೇಗೆ ನಮ್ಮ ಆತ್ಮಕಲಹದ ಸಂಧಿಯನ್ನು ಸಾಧಿಸಿ ನಮ್ಮ ರಾಜ್ಯವನ್ನು ಅಪಹರಿಸಿದರೋ, ಅದೇ ಪ್ರಕಾರ ನಾವೂ ಅದನ್ನು ತಿರುಗಿ ದೊರಕಿಸಬೇಕು. ಪ್ರಸಂಗದಲ್ಲಿ ಜೋರಿನಿಂದ ಕಸಿದುಕೊಳ್ಳಬೇಕು; ಅಂದರೆ ಸೇಡು ತೀರಿಸಿಕೊಂಡಂತೆ ಆಗುತ್ತದೆ. ಈಗ ಆ ಸುಯೋಗದ ಲಕ್ಷಣವು ತೋರಹತ್ತಿದೆ. ಕಾರಣ ಸದ್ಯಕ್ಕೆ ನೀವು ಮೌನವನ್ನು ಧರಿಸಬೇಕು.

ಅವನೀನಾಥನ ಮಾತುಗಳು ಆ ದರಬಾರದಲ್ಲಿ ಭೀಷಣ ಚಾಂಚಲ್ಯವನ್ನು ಉಂಟು ಮಾಡಿದವು. ಅವನೀನಾಥನ ಮಾತುಗಳು ಎಲ್ಲರಿಗೆ ಸಮಾಧಾನಕಾರಕವಾಗದಿದ್ದರೂ ಸ್ವಜಾತಿಯ ಸ್ವಾರ್ಥದೃಷ್ಟಿಯಿಂದ ವಿಚಾರಿಸಿದರೆ, ಭಯಪಡಲು ಕಾರಣವಿದ್ದಿಲ್ಲ. ಗೌಡಸಿಂಹಾಸನವು ಪುನಃ ಹಿಂದುಗಳಿಗೆ ದೊರಕಬೇಕಾದರೆ ಗಣೇಶನಾರಾಯಣನು ಸುಮ್ಮನಿರುವದೇ ಯೋಗ್ಯವು. ರಾಜಕಾರಣಪಟುವಾದ ಸಾತೋಡ ರಾಜನ ವಿಚಾರವು ಎಲ್ಲ ಹಿಂದೂಗಳಿಗೆ ಶ್ರೇಯಸ್ಕರವು. ಭಟ್ಟಾಚಾರ್ಯನು ಎದ್ದು ನಿಂತು ಅವನೀನಾಥನ ಮಾತಿಗೆ ಉತ್ತೇಜನ ಕೊಟ್ಟನು.

ಆಗ ದರಬಾರದ ಎಲ್ಲ ಮುಸಲ್ಮಾನರ ಮುಖದಲ್ಲಿಯೂ ವಿರಕ್ತ ಭಾವವು! ಸೇನಾಪತಿಯಾದ ಎನಾಯುತಖಾನನು ಎದ್ದು ನಿಂತು:—ಮಹಾರಾಜ, ಅಪರಾಧವನ್ನು ಕ್ಷಮಿಸಬೇಕು. ಸಾತೋಡದ ರಾಜರ ಮತ್ತು ಭಟ್ಟಾಚಾರ್ಯರ ಸ್ವಜಾತಿ ಪಕ್ಷಪಾತಪೂರ್ಣಮಾತುಗಳಿಂದ ಪ್ರತಿಯೊಬ್ಬ ಮುಸಲ್ಮಾನನ ಮನಸ್ಸಿನಲ್ಲಿ ಆತ್ಮಪಕ್ಷಸಮರ್ಥನೆಯು ಉದ್ರೇಕವಾಗುವದು ಸಹಜವದೆ. ಯಾವ ವೀರಸಮಾಜವು ಬಹು ದೂರವಾದ ಮಧ್ಯ ಏಶಿಯಾದಿಂದ ಬಂದು, ಭಾರತಭೂಮಿಯ ವಕ್ಷಸ್ಥಳದಲ್ಲಿ ವಿಜಯಧ್ವಜವನ್ನು ನಡಿಸಿ, ಸಮಗ್ರ ಹಿಂದುಸ್ಥಾನವನ್ನು ತಮ್ಮ ಶೂರತನದಿಂದ ಕಂಪಾಯಮಾನಗೊಳಿಸಿತೋ, ಅಂಥ ಗೌರವಶಾಲಿಯಾದ ಸಮಾಜವು ಸಾಧಾರಣ

ದಸ್ಯುಗಳಂತೆ ತಮ್ಮ ಪ್ರಭಾವವನ್ನು ಎರಡು ಘಳಿಗೆ ತೋರಿಸಿ ಅಂಧಕಾರ ದಲ್ಲಿ ವಿಲೀನವಾಗಬೇಕೆ? ಮುಸಲ್ಮಾನರು ಅಷ್ಟು ಕ್ಷೀಣವೀರ್ಯಶಾಲಿ ಗಳಲ್ಲ. ಅವರು ಶೌರ್ಯದಲ್ಲಿ ಸಿಂಹದಂತೆ, ಸೇಡುತೀರಿಸಿಕೊಳ್ಳುವದರಲ್ಲಿ ಹುಲಿಯಂತೆ ಇರುವರು. ಇಂದು ಗೌಡಸಿಂಹಾಸನವು ಆತ್ಮಕಲಹದಿಂದ ಹೊಯ್ದಾಡಹತ್ತಿದ ಮಾತ್ರಕ್ಕೆ ಮುಸಲ್ಮಾನರ ಶಕ್ತಿಯೇ ನಾಶವಾಯಿ ತೆಂದು ಭಾವಿಸಬೇಕೇ? ಹಾಗೆಂದಿಗೂ ಆಗದು. ಆ ಜಾತಿಯು ಐಕ್ಯದಲ್ಲಿ ಅದ್ವಿತೀಯವು. ಅವರು ದೈವವಾದಿಗಳಲ್ಲ; ಒಂದೆರಡು ಸಾರೆ ಅಪಜಯ ಹೊಂದಿದರೂ ಉತ್ಸಾಹಭಂಗಪಡುವವರಲ್ಲ. ಮಹಾರಾಜ, ಬೇಕಾದರೆ ನೀವು ತಟಸ್ಥರಾಗಿ ಇರ್ರಿ. ಅದರಿಂದ ಮುಸಲ್ಮಾನ ಸಮಾಜದ ಹಾನಿಯು ವಿಶೇಷವೇನೂ ಆಗಲಿಕ್ಕಿಲ್ಲ. ಅಜೀಮ ಹಾಗೂ ನಸೆರಿತ್‌ಶಹ ಇಬ್ಬರಲ್ಲಿ ಯಾರೇ ಗೆಲ್ಲಲಿ, ಅಥವಾ ಇಬ್ಬರೂ ನಾಶಹೊಂದಲಿ, ಅದರಿಂದ ಮುಸ ಲ್ಮಾನರ ಸಾಮರ್ಥ್ಯಕ್ಕೆ ವಿಶೇಷ ತೊಂದರೆ ಬಾರದು. ಸಾಮಾನ್ಯ ವಿಕ್ಷೋ ಭವನ್ನು ನೋಡಿ ಈ ಸಮಾಜದ ಅಂತ್ಯಕಾಲವೇ ಬಂದಿತೆಂದು ನೀವು ಭಾವಿಸಬೇಡಿರಿ. ಈ ಜಾತಿಗೆ ಜೀವನವುಂಟು. ಅದು ಇಂಥ ಸಾಮಾನ್ಯ ಬಿರುಗಾಳಿಯನ್ನು ಪಾರಾಗಿ, ಇಮ್ಮಡಿ ಉತ್ಸಾಹದಿಂದ-ದರ್ಪದಿಂದ ಮುಂದರಿಯುವದು. ಎನಾಯಿತಖಾನನ ತೇಜಸ್ವಿಯಾದ ವಾಣಿಯಿಂದ ಎಲ್ಲ ಮುಸಲ್ಮಾನರ ಮನಸ್ಸಿನಲ್ಲಿ ವೀರತ್ವಸಂಚಾರವಾಯಿತು. ಹಿಂದೂ ಜನರ ಮನಸ್ಸು ಚಂಚಲವಾದವು. ರಾಜಾಗಣೇಶನಾರಾಯಣನ ಮನಸ್ಸು ಕೂಡ ಚಂಚಲವಾಯಿತು. ಹಿಂದೂ-ಮುಸಲ್ಮಾನರನ್ನು ಸಮದೃಷ್ಟಿ ಯಿಂದ ನಡೆಯಿಸಿಕೊಳ್ಳುವ ಅವನಿಗೆ ದರಬಾರದಲ್ಲಿಯ ಈ ಜಾತಿದ್ವೇಷದ ಮಾತುಗಳು ರುಚಿಸಲಿಲ್ಲ. ಅವನು ಎರಡನೆಯವರ ಅಭಿಪ್ರಾಯಕ್ಕೆ ಆಸ್ಪದಗೊಡದೆ ಪುತ್ರನಾದ ಯದುನಾರಾಯಣನ ಕಡೆಗೆ ನೋಡಿ:—ಕುಮಾರ, ನಿನ್ನ ಅಭಿಪ್ರಾಯವೇನು? ಎಂದು ಕೇಳಿದನು.

ಕುಮಾರ ಯದುನಾರಾಯಣನು ಎಲ್ಲರ ಅಭಿಪ್ರಾಯವನ್ನು ಸಮಾ ಧಾನ ಚಿತ್ತದಿಂದ ಕೇಳಿಕೊಂಡಿದ್ದನು. ಎನಾಯಿತಖಾನನ ವೀರವಚನ ಗಳಿಂದ ಅವನ ಚಿತ್ತಚಾಂಚಲ್ಯವು ದೂರಾಗಿತ್ತು. ಅವನು ತಂದೆಯ ಅಪ್ಪಣೆಯ ಮೇರೆಗೆ ಎದ್ದು ನಿಂತು:—ಯಾವ ಸಭೆಯು ಹಿಂದೂ ಮುಸ ಲ್ಮಾನರಿಬ್ಬರನ್ನೂ ಸಮದೃಷ್ಟಿಯಿಂದ ಆಮಂತ್ರಿಸಿರುವದೋ, ಅಲ್ಲಿ ಇಬ್ಬರ

ನ್ನೊಬ್ಬರು ದೂಷಿಸುವದು ನನ್ನ ಅಲ್ಪ ಬುದ್ಧಿಗಂತೂ ಸರಿದೋರುವದಿಲ್ಲ. ಹಿಂದೂ ಮುಸಲ್ಮಾನರಲ್ಲಿ ಕಲಹ ಬೀರುವದು ನಮ್ಮ ಉದ್ದೇಶವಿಲ್ಲ. ನಮ್ಮ ಉದ್ದೇಶವು ಹಿಂದೂಮುಸಲ್ಮಾನರ ನಡುವೆ ಪ್ರೀತಿಯನ್ನು ಹುಟ್ಟಿ ಸುವದು ಇರುತ್ತದೆ. ಇದನ್ನು ಸಂಪೂರ್ಣವಾಗಿ ಲಕ್ಷ್ಯದಲ್ಲಿಟ್ಟುಕೊಂಡು ವರ್ತಿಸಬೇಕು. ಗೆದ್ದವರೇ ಆಗಲಿ, ಸೋತವರೇ ಆಗಲಿ ಇಬ್ಬರೂ ಒಂದೇ ಭೂಮಿಯ ಮೇಲೆ ವಾಸಮಾಡಿ, ಒಂದೇ ಭೂಮಿಯ ರಸವನ್ನು ಪಾನ ಮಾಡಿ ಬೆಳೆಯುವೆವಲ್ಲವೆ? ಅಂದಬಳಿಕ ನಾವೆಲ್ಲರೂ ಭೂಮಿಯ ಸಂಪರ್ಕ ದಿಂದ ಬಂಧುಗಳು; ನಾವು ಸ್ವಜಾತಿಯ ಪ್ರತಿಹಿಂಸಾ, ಸೇಡು ಮೊದಲಾದವುಗಳನ್ನು ಮರೆತು ಬಿಡಬೇಕು. ಐಕ್ಯದಿಂದ ಇರಬೇಕು. ಅಂದರೆ ದೇಶದ ಉನ್ನತಿ, ಸುಖ-ಶಾಂತಿಗಳು ಹೆಚ್ಚಾಗುವವು. ಸದ್ಯಕ್ಕೆ ಗೌಡದಲ್ಲಿಯ ಆತ್ಮಕಲಹದ ಮೂಲವು ಸ್ವಜಾತಿ ಪಕ್ಷಪಾತವು. ನಸೆರಿತನು ಹಿಂದೂ ದ್ವೇಷಿಯು; ಅಜಿಮನು ಸಮದೃಷ್ಟಿಯುಳ್ಳವನು. ಅಂದಬಳಿಕ ಅಜಿಮಶಹನ ಉದ್ದೇಶವೂ ನಮ್ಮ ಉದ್ದೇಶವೂ ಒಂದೇ. ಇಂಥ ಪ್ರಸಂಗದಲ್ಲಿ ನಾವು ನಿರಪೇಕ್ಷರಾಗಿರುವದು ಅಯೋಗ್ಯವು. ಯಾವ ಪಕ್ಷಸೇರುವದು ಯೋಗ್ಯವೆಂಬದನ್ನೇ ವಿಚಾರಿಸತಕ್ಕದ್ದು. ಇದಲ್ಲದೆ ಅಜಿಮನು ಮೊದಲೇ ಸಹಾಯವನ್ನು ಕೇಳಿರುವನು. ಅಂದಬಳಿಕ ನಾವು ಅಜಿಮನಿಗೇ ಸಹಾಯ ಮಾಡುವದು ಯೋಗ್ಯವೆಂದು ನನಗೆ ತಿಳಿಯುತ್ತದೆ.

ಪುತ್ರನ ಮಾತುಗಳನ್ನು ಕೇಳಿ ರಾಜನಿಗೆ ಮನಸ್ಸಿನಲ್ಲಿ ಸಂತೋಷ ವಾಯಿತು. ಆದರೂ ಅವನು:—ಕುಮಾರ, ನಸೆರಿತನು ಸದ್ಯಕ್ಕೆ ಗೌಡ ಸಿಂಹಾಸನದ ಒಡೆಯನು. ಅಜಿಮನು ಸಹಾಯಸಂಪತ್ತು ಇಲ್ಲದ ನಿರಾ ಶ್ರಿತನು. ಇಂಥಲ್ಲಿ ಅಜಿಮನಿಗೆ ಸಹಾಯ ಮಾಡುವದು ಶುಭವಾದೀತೇನು?

ಯದು:—ಪಿತನೇ, ಆ ವಿಚಾರವನ್ನು ಮಾಡಲಿಕ್ಕೆ ಹೋದರೆ, ಮೊದಲು ನ್ಯಾಯಕ್ಕೆ ತಿಲಾಂಜಲಿಯನ್ನು ಕೊಡಬೇಕಾಗುವದು. ಸತ್ಯ ದಿಂದ ದೂರಾಗಬೇಕಾಗುವದು. ಎಲ್ಲ ಮುಸಲ್ಮಾನರೂ ಅಜಿಮನ ವಿರುದ್ಧವಾಗಿ ನಿಲ್ಲಲೊಲ್ಲರೇಕೆ, ಸಮಸ್ತ ಹಿಂದುಗಳೂ ನಸೆರತನು ಪ್ರಬಲ ನೆಂದು ಅವನ ಪಕ್ಷವನ್ನೇ ಸ್ವೀಕರಿಸಲೊಲ್ಲರೇಕೆ, ನಾವು ಮಾತ್ರ ಅಜಿಮ ನಿಗೇ ಸಹಾಯವನ್ನು ಮಾಡತಕ್ಕದ್ದು.

ರಾಜಾ ಅವನೀನಾಥನಿಂದ ಸುಮ್ಮನಿರುವದಾಗಲಿಲ್ಲ. ಅವನು ಅಳಿ

ಯನ ಕಡೆಗೆ ನೋಡುತ್ತ:—ಹೀಗೆ ಮಾಡುವದರಿಂದ ನಮ್ಮ ಕಾಲಮೇಲೆ ನಾವೇ ಕಲ್ಲುಹಾಕಿಕೊಂಡಂತೆ ಆಗುವದು. ಮುಸಲ್ಮಾನರಿಗೆ ಸಹಾಯ ಮಾಡಿದಂತೆ ಆಗುವದು.

ಯದು:—ಇದರಿಂದ ಯಾವ ಮುಸಲ್ಮಾನರಿಗೂ ಸಹಾಯವಿಲ್ಲ; ಐಕ್ಯತೆಗೆ ಸಹಾಯವು. ಇಂದು ಮುಸಲ್ಮಾನರು ಭರತಖಂಡದ ತುಂಬಾ ವಾಸಮಾಡಹತ್ತಿರುವರು. ಶೌರ್ಯದಲ್ಲಿ, ಐಶ್ವರ್ಯದಲ್ಲಿ, ಒಕ್ಕಟ್ಟಿನಲ್ಲಿ ಅವರೇ ಮುಂದುವರಿದಿರುವರು. ಅವರು ದಾರಿಕಾರರಂತೆ ಎರಡುದಿವಸ ಇದ್ದು ಹೋಗಲಿಕ್ಕೆ ಭರತಭೂಮಿಗೆ ಬಂದಿಲ್ಲ. ಅವರು ಇಲ್ಲಿಯೇ ಸ್ಥಿರವಾಗಿ ಇರಲಿಕ್ಕೆ-ಸಂಸಾರ ಮಾಡಿಕೊಂಡು ವಾಸಮಾಡಲಿಕ್ಕೆ-ನಮ್ಮ ಭೂಮಾತೆ ಯನ್ನು ತಾವೂ ಮಾತೆಯೆಂದು ತಿಳಕೊಂಡು ಇರಲಿಕ್ಕೆ ಬಂದಿರುವರು. ನಮ್ಮ ಪೂರ್ವಜ ಋಷಿಗಳು ಇದೇ ಉದ್ದೇಶದಿಂದ ಭಾರತಕ್ಕೆ ಬಂದಿದ್ದ ರಲ್ಲವೇ? ಅನಾರ್ಯರು ಅವರನ್ನು ಹೊರಗೆ ಹಾಕಲು ಎಷ್ಟು ಶ್ರಮ ಬಟ್ಟರು? ನಮ್ಮ ಭರತಮಾತೆಯು ಅನ್ಯದೇಶದಿಂದ ಬಂದ ಮಕ್ಕಳಮೇಲೆ ಬಹು ಪ್ರೀತಿಯು. ಅಂದಬಳಿಕ ನಾವು ಮುಸಲ್ಮಾನರನ್ನು ಹೊರಗೆ ಹಾಕುವದು ಶಕ್ಯವಿಲ್ಲ. ವ್ಯರ್ಥವಾಗಿ ಪ್ರಾಣಹಿಂಸೆಯಿಂದ ದೇಶದಲ್ಲಿ ಅಶಾಂತಿಯನ್ನು ಉಂಟುಮಾಡಿದಂತೆ ಆಗುತ್ತದೆ. ನಾವು ಹೊರಗೆ ಹಾಕಲು ಪ್ರಯತ್ನ ಮಾಡಿದಂತೆ, ಮಾತೆಯು ಅವರನ್ನು ದೃಢವಾಗಿ ಆಲಿಂಗಿಸಿಕೊಳ್ಳುವಳು. ಎಂದು ಹಿಂದು ಮುಸಲ್ಮಾನರಲ್ಲಿ ಐಕ್ಯವುಂಟಾಗುವದೋ, ಅಂದು ದುರ್ಜಯವಾದ ಹೊಸ ಜನಾಂಗವುಂಟಾಗುವದು.'' ಎಂದು ಹೇಳಿ ಕುಮಾರನು ಸುಮ್ಮನಾದನು. ಎಲ್ಲ ಸಭಿಕರೂ "ಶಹಬ್ಬಾಸ್! ಶಹಬ್ಬಾಸ್''!! ಎಂದು ಹೊಗಳಿದರು.

ಅಜಿಮನ ದೂತನು ಈ ಸುದ್ದಿಯ ಪತ್ರವನ್ನು ತೆಗೆದುಕೊಂಡು ಹೊರಟು ಹೋದನು.



೭

ತಾನೋರೇರ ಸಮರಭೂಮಿಯಲ್ಲಿ ಅಜೀಮನ ಸೈನ್ಯವು ಛಾವಣಿ ಬಿಟ್ಟಿದೆ. ಬಾದಶಹನ ಶಿಬಿರ ಶೀರ್ಷದಲ್ಲಿ ಅರ್ಧಚಂದ್ರಾಂಕಿತ ನಿಶಾನೆಯು ಸ್ವಲ್ಪುಗಾಳಿಬಿಟ್ಟಕೂಡಲೆ ಹಾರಾಡಹತ್ತಿತ್ತು. ಬಹಳ ದಾರಿಯನ್ನು ನಡೆದು ಬಂದ ಸೈನ್ಯವು ದಣಿವಾರಿಸಿಕೊಳ್ಳಹತ್ತಿದೆ. ಕೆಲವರು ಮಲಗಿಕೊಂಡರು; ಕೆಲವರು ಅರ್ಧಮಲಗಿಕೊಂಡರು; ಕೆಲವರು ಆಟನೋಟಗಳಿಂದ ಮನಸ್ಸಿಗೆ ಸಮಾಧಾನವಾಗುವಂತೆ ಮಾಡಿಕೊಳ್ಳಹತ್ತಿದ್ದರು. ಕಾವಲುಗಾರರು ಮಾತ್ರ ಅನಿವಾರ್ಯಹದಿಂದ ಅತ್ತಿಂದ ಇತ್ತ ಇತ್ತಿಂದ ಅತ್ತ ಅಡ್ಡಾಡುತ್ತಿದ್ದರು.

ಅಜಿಮಶಹ ಶಿಬಿರದ ಮುಂದೆ ಅಂಗಳದಲ್ಲಿ ಎರಡು ಆಸನಗಳು ಮಂಡಿತವಾಗಿದ್ದವು. ಒಂದರಲ್ಲಿ ಅಜೀಮನು ಸ್ವತಃ ಕುಳಿತಿದ್ದನು ಇನ್ನೊಂದರ ಮೇಲೆ ಮಗಳಾದ ಅಶಮಾನಳು ಕುಳಿತಿದ್ದಳು. ಅಜೀಮನಿಗೆ ಧೈರ್ಯಹೇಳುವದೂ ಸಮಾಧಾನ ಹೇಳುವದೂ ಅಶಮಾನಳ ಕೆಲಸವೇ. ಅವಳು ಅವನಿಗೆ ಮುಖ್ಯ ಮಂತ್ರಿಸ್ವರೂಪಳು. ಅಶಮಾನಳು ಬೀಸಣಿಕೆಯಿಂದ ತಂದೆಗೆ ಗಾಳಿಯನ್ನು ಹಾಕುತ್ತಿದ್ದಳು. ಅವನು ವಿಚಾರಮಗ್ನನು. ಅವನು ಬಹು ದೂರದ ಪ್ರವಾಸದಿಂದ ದಣಿದಿದ್ದಿಲ್ಲ; ಆದರೆ ಚಿಂತೆಯೇ ಅವನ ವಿಷಣ್ಣತೆಯು ಕಾರಣವಾಗಿತ್ತು.

ಅಶಮಾನಳು ಸ್ನೇಹಪೂರಿತ ಕಂಠದಿಂದ:—ಅಪ್ಪಾ, ಇಷ್ಟು ವಿಚಾರ ಮಾಡುವದಾದರೂ ಏಕೆ? ಯುದ್ಧದಲ್ಲಿ ಜಯಾಪಜಯಗಳು ಮೊದಲೇ ಸಾರುತ್ತ ಬರುತ್ತವೇನು? ನೀನು ಸತ್ಪಕ್ಷದಿಂದ ಯುದ್ಧಮಾಡತಕ್ಕವನು. ಒಂದುವೇಳೆ ಅಪಜಯವಾದರೂ ಯಾರೂ ನಿಂದಿಸರು. ಬೇಕಾದರೆ ನಾವು ಈ ವಂಗದೇಶವನ್ನೇ ತ್ಯಾಗಮಾಡಿ ಹೋಗೋಣ ನೀನು ಇಷ್ಟು ಚಿಂತೆ ಮಾಡುವ ಕಾರಣವಿಲ್ಲ ನೋಡು, ಈ ೪-೮ ದಿವಸಗಳಲ್ಲಿ ಚಿಂತೆಯಿಂದ ನಿನ್ನ ಮುಖವು ಎಷ್ಟು ಬಾಡಿದೆ? ನಿನ್ನನ್ನು ನೋಡಿದ ಕೂಡಲೆ ದುಃಖವು ಬರುತ್ತದೆ.

ಮಾತು ಮಾತಾಡುವಷ್ಟರಲ್ಲಿ ಅವಳ ಕಣ್ಣುಗಳಿಂದ ನೀರು ತಾವೇ ಬರಹತ್ತಿದವು. ಪಿತನು ಮಗಳನ್ನು ತಬ್ಬಿಕೊಂಡು:—ಅಮ್ಮಾ, ನಿನಗೆ ಏನು ಹೇಳಲಿ? ಈ ಜಗತ್ತಿನಲ್ಲಿ ಇಂಥ ಸಂಗತಿಗಳಿರುತ್ತವಲ್ಲ; ನಾವು ಅವುಗಳನ್ನು ಮನಃಪೂರ್ವಕವಾಗಿ ಮರೆಯಲು ಪ್ರಯತ್ನಿಸಿದಂತೆ ಅವು ಯಾವಾಗಲೂ ಕಣ್ಣು ಮುಂದೆ ಮೂರ್ತಿಮಂತವಾಗಿ ಬಂದು ನಿಲ್ಲುವವು.

ಕಡೆಗೆ ಆ ವಿಚಾರವೇ ಸೌಖ್ಯವೂ ಶಾಂತಿಯೂ ಎಂಬಂತೆ ಆಗುವದು. ಮಗೂ, ನೀನು ಈ ವಂಗದೇಶವನ್ನೇ ಬಿಟ್ಟು ಹೋಗುವಾ, ಎಂದು ಹೇಳಿದೆಯಲ್ಲ; ಅದು ಶಕ್ಯವೇ? ಗೌಡಸಿಂಹಾಸನದ ಬಾಧ್ಯತೆಯು ನನ್ನದು. ನೀನು ರಾಜಪುತ್ರಿಯು. ಈರ್ವರೂ ಇದನ್ನು ತ್ಯಜಿಸಿ ಎರಡನೇ ದೇಶಕ್ಕೆ ಹೋಗಿ ಅನ್ಯರ ಬಾಗಿಲಮುಂದೆ ನಿಲ್ಲಬೇಕೇ? ಇದಕ್ಕಿಂತ ಕೆಟ್ಟ ದುರ್ದೈವವು ಮತ್ತೇನಿದೆ? ಆಗದ ಈ ಮಾತೃಭೂಮಿಯನ್ನು ಬಿಟ್ಟು ಒಂದು ಹೆಜ್ಜೆ ಕೂಡ ಹೊರಗೆ ಹೋಗುವದಿಲ್ಲ. ಪ್ರಯತ್ನಪೂರ್ವಕವಾಗಿ ಈ ಗೌಡಸಿಂಹಾಸನವನ್ನು ದೊರಕಿಸುವೆನು. ಇಲ್ಲದಿದ್ದರೆ ಇದೇ ರಣಭೂಮಿಯಲ್ಲಿ ನನ್ನ ಸಮಾಧಿಯು!

ತಂದೆಯ ಬಾಯಿಂದ ಈ ಪ್ರಕಾರದ ಮಾತುಗಳನ್ನು ಹೊರಡಿಸಿ ಅವನ ಚಿಂತೆಯನ್ನು ಮರೆಯಿಸಬೇಕೆಂದು ಆಸಮಾನಳು—"ನಾವು ವಂಗವನ್ನೇ ಬಿಟ್ಟುಹೋಗುವಾ" ಎಂದಿದ್ದಳು. ಆದರೆ ತಂದೆಯು ಈ ಮಾತು ಕೇಳಿ:—ಹೌದು, ನಾವಂತೂ ವಂಗದೇಶದ ಹೊರಗೆ ಒಂದು ಹೆಜ್ಜೆ ಸಹ ಇಡುವಂತೆ ಇಲ್ಲವಷ್ಟೇ? ಅಂದಬಳಿಕ ಈಗ ಎಲ್ಲ ಭಾರವು ವಂಗೀಯ ಪ್ರಜೆಗಳ ಕಡೆಗಲ್ಲವೆ? ಈ ಅಭಿಮಾನವು ಅವರಿಗೆ ಇರಬೇಕಷ್ಟೇ? ಇಂಥ ಸುಪುತ್ರ ವಂಗಮಾತೆಯ ಮಕ್ಕಳು ಇಷ್ಟೇಕೆ ನಿರ್ಜೀವಿಗಳು? ವಂಗೀಯ ಜನರಲ್ಲಿ ಶೂರತನವಿದೆ; ಚತುರತನವಿದೆ; ಉದಾರತನವಿದೆ; ಆದರೆ ಅವರು ಆತ್ಮವಿಸ್ಮೃತಿ ಹೊಂದಿ ಘೋರನಿದ್ರಾವಶರಾಗಿರುವರು. ನಾವು ರಾಜಾ ಗಣೇಶ ನಾರಾಯಣನ ಕಡೆಗೆ ಸಹಾಯ ಕೇಳಲು ದೂತನನ್ನು ಕಳುಹಿಸಿ ಏಳು ದಿವಸಗಳಾದವು. . ಇನ್ನೂ ಉತ್ತರವಿಲ್ಲ ದೂತನು ಕೂಡ ತಿರುಗಿ ಬಂದಿಲ್ಲ.

ಅಜೀಮನು ವಿಷಾದದಿಂದ ನಗುತ್ತ:—ಅವತ್ತಿನ ಸಂಗತಿಯು ನೆನಪಿರುವದಷ್ಟೇ? ಅಂದು ನಾನು ಮುಸಲ್ಮಾನರ ಪಕ್ಷಗಟ್ಟಿಮಾತಾಡಿದೆನೆಂದು ಹೀಯಾಳಿಸಿದ್ದೆ. ಈಗ ನೀನೇ ವಿಚಾರಮಾಡು. ಹಿಂದುಗಳ ಕೈಯಲ್ಲಿ ಮುಸಲ್ಮಾನರು ನಡೆಯುವದು ಯೋಗ್ಯವೇ ಹೇಗೆ? ಮುಸಲ್ಮಾನರು ಎಷ್ಟೇ ತಪ್ಪು ಮಾಡಲಿ, ಅವರ ಅಭಿಮಾನವು ಜಾಗ್ರತವು, ಹಿಂದುಗಳು ಮಬ್ಬು. ಮುಸಲ್ಮಾನರ ತೇಜವು ಉರಿಯುವ ಕೆಂಡದಂತೆ, ಹಿಂದೂಜನರ ತೇಜವು ಆರಹತ್ತಿದ ಕೆಂಡದಂತೆ. ಈ ಎರಡು ಭಿನ್ನಾವಸ್ಥೆಯಲ್ಲಿಯ ಸಮಾಜಗಳ ಐಕ್ಯವು ಹೇಗೆ ಆಗಬೇಕು? ಆಸಮಾನ, ನಿನ್ನ ತಿಳುವಳಿಕೆಯು ತಪ್ಪಾಗಿರುವದು.

ಅಕಮಾನ:—ಅಪ್ಪಾ, ನಾನೇನೂ ಹಾಗೆ ಹೇಳಲಾರೆನು ಹಿಂದು ಗಳ ಅಪರಾಧವೂ ಉಂಟು; ಆದರೆ ಯಾವ ಪದಾರ್ಥವು ಜೋರಿನಿಂದ ಉರಿಯುವದೋ ಅದು ಬೇಗ ಆರುವದು. ಯಾವದು ಸಾವಕಾಶವಾಗಿ ಉರಿಯುವದೋ ಅದು ಸಾವಕಾಶ ನಂದುವದು. ಕಾರಣ ನಾವು ಪ್ರಯತ್ನ ದಿಂದ ತೀವ್ರಜ್ವಾಲಾಗ್ರಾಹಿಯಂತಿರುವ ಮುಸಲ್ಮಾನರನ್ನೂ ಮಂದಗತಿಯ ಹಿಂದೂಜನರನ್ನೂ ಒಂದು ಮಾಡಿದರೆ ಆ ಜ್ವಾಲೆಯು ಹೇಗೆ ಆಗುವದು? ಅಪ್ಪಾ ಇದಲ್ಲದೆ .... .... ....

ಇಷ್ಟರಲ್ಲಿ ರಾಜಾಗಣೇಶ ನಾರಾಯಣನ ಕಡೆಗೆ ಕಳಿಸಿದ ದೂತನು ಬಂದು ಕುರ್ನಿಸ ಮಾಡಿ ಪತ್ರವನ್ನು ಅಜೀಮನ ಕೈಯಲ್ಲಿ ಕೊಟ್ಟನು. ತಂದೆ-ಮಕ್ಕಳಿಬ್ಬರೂ ಕುತೂಹಲದಿಂದ ಒಂದೇ ಉಸುರಿನಲ್ಲಿ ಆ ಪತ್ರವನ್ನು ಓದಿ ಮುಗಿಸಿದರು. ಇಬ್ಬರ ಮುಖದಲ್ಲಿಯೂ ಆನಂದದ ಕಳೆಯು. ಮಹಾರಾಜಾ ಗಣೇಶನಾರಾಯಣನು ಸೈನ್ಯಸಹಿತ ಅಜಿಮನ ಸಹಾಯಕ್ಕೆ ಹೊರಟಂತೆ ಪತ್ರವಿತ್ತು. ಅಜೀಮನು ದೂತನನ್ನು ಕುರಿತು:—ಇಷ್ಟೇಕೆ ತಡವಾಯಿತು? ಎಂದು ಕೇಳಿದನು.

ದೂತ:—ನಾನು ಬೇಗ ಬರುತ್ತಿದ್ದೆನು; ಆದರೆ ದಾರಿಯಲ್ಲಿ ಶತ್ರುಪಕ್ಷದ ಒಂದು ಸೈನ್ಯವನ್ನು ನೋಡಿದೆನು; ಮತ್ತು ಗುಪ್ತವಾಗಿ ಅವರಿಂದ ಸಮಾಚಾರವನ್ನೂ ತಿಳಿದುಕೊಂಡಿರುವೆನು ಅವರು ಇಂದೇ ರಾತ್ರಿ ನಮ್ಮನ್ನು ಮುತ್ತುವರು. ಇದಲ್ಲದೆ ನಸೆರಿತ್‌ಶಹನೂ ಸೇನಾಪತಿಯಾದ ಕಾಶೀಮಖಾನನೂ ದೊಡ್ಡ ಸೈನ್ಯಸಹಿತ ಬೇರೆ ಬೇರೆ ದಿಕ್ಕುಗಳಿಂದ ಬಂದು ಅವರೂ ಮುತ್ತಿಗೆ ಹಾಕುವರು. ಈ ಸಂಗತಿಯನ್ನು ತಿಳಿದು ರಾಜಮಾರ್ಗವನ್ನು ಬಿಟ್ಟು ಸುತ್ತುನರಿದು ಬರಲಿಕ್ಕೆ ವಿಲಂಬವಾಯಿತು. ಶಹಾಜಾದಾ, ಈಗ ಎಲ್ಲ ಕಡೆಯಿಂದಲೂ ಸೈನ್ಯವು ಸುತ್ತುಗಟ್ಟುವ ಲಕ್ಷಣ ತೋರುತ್ತದೆ. ಪ್ರಯತ್ನಪಟ್ಟರೆ ಈಗಲೂ ಸಹ ಇಲ್ಲಿಂದ ಹೋಗಲಿಕ್ಕೆ ಬರುವಂತಿರುತ್ತದೆ. ನಾವು ಮೊದಲಿನ ಛಾವಣಿ ಬಿಟ್ಟು ಇಲ್ಲಿಗೆ ಬಂದದ್ದು ಗುಣವಾಗಲಿಲ್ಲ.

ಚಿಂತಾಕುಲ ಅಜೀಮನು:—ರಾಜಾ ಗಣೇಶನಾರಾಯಣನು ಎಷ್ಟು ದೂರ ಇರುವನು?

ದೂತ:—ರಾಜನು ಹೀಗೆ ಹೇಳಿರುವನಲ್ಲ-ನೀವು ಕೆಲವು ದಿವಸ

ಇಲ್ಲಿಯೇ ಇದ್ದು ಆತ್ಮರಕ್ಷಣೆ ಮಾಡಿಕೊಳ್ಳಬೇಕು. ನಾವು ಗೌಡವನ್ನು ಮುತ್ತಿಗೆ ಹಾಕುವೆವು ಇದರಿಂದ ಪ್ರತಿಪಕ್ಷಿಗಳ ಬಲವು ಎರಡು ಭಾಗವಾಗಿ ಜಯವು ಸಿಗುವದು. ಗೌಡವನ್ನು ಸ್ವಾಧೀನ ಪಡಿಸಿಕೊಂಡು ಬರಲಿಕ್ಕೆ ರಾಜನಿಗೆ ಅವಧಿಯು ಬೇಕು.

ಇಷ್ಟರಲ್ಲಿ ಮತ್ತೊಬ್ಬ ದೂತನು ಬಂದು:—ಜಹಂಪನ್ಹಾ, ಸಮೀಪದಲ್ಲಿ ವೈರಿಗಳ ಕೋಲಾಹಲವು ಕೇಳಬರುತ್ತದೆ. ಶತ್ರುಗಳು ಸಮೀಪದಲ್ಲಿ ಬಂದಂತೆ ಕಾಣುತ್ತದೆ. ನಮ್ಮ ಸೈನ್ಯದ ಮುಸಲ್ಮಾನ ಸೈನಿಕರು ಶತ್ರುಗಳಿಗೆ ಶರಣು ಹೋಗುವ ವಿಚಾರದಲ್ಲಿದ್ದಂತೆ ತೋರುತ್ತದೆ. ಹಿಂದೂ ಸೈನಿಕರು ಮಾತ್ರ ಯುದ್ಧಮಾಡಲು ಉತ್ಸಾಹವುಳ್ಳವರಾಗಿರುವರು. ಸೇನಾಪತಿಗಳಾದ ವೀರಅಲ್ಲೀಖಾನರೂ ಗುಣರಾಮರಾಯರೂ ನಿಮ್ಮ ಮಾರ್ಗವನ್ನೇ ನೋಡುತ್ತಿರುವರು

ಅಜೀಮನು ಎದ್ದು ನಿಂತು ದೂತನಿಗೆ:—ಅವರಿಗೆ ಹೇಳು, ನಾನು ಈಗ ಬರುತ್ತೇನೆ; ಯುದ್ಧವು ಬಿಟ್ಟಿದ್ದಲ್ಲ.

ದೂತರಿಬ್ಬರೂ ಹೊರಟು ಹೋದರು ಅಜೀಮನು ಮಗಳನ್ನು ಕುರಿತು:—"ಈಗ ಹೇಗೆ ಮಾಡಬೇಕು ಮಗು?" ಎಂದನು.

ಅಶಮಾನಳು ತಂದೆಯ ಕೈಹಿಡಿದುಕೊಂಡು:—ಅಪ್ಪಾ, ದೇವರ ಮೇಲಿನ ವಿಶ್ವಾಸವನ್ನು ಕಡಿಮೆ ಮಾಡಬೇಡ. ಎಲ್ಲ ವ್ಯವಸ್ಥೆಯನ್ನೂ ಅವನೇ ಮಾಡುವನು. ಅವನೇ ಶೂರತನವನ್ನೂ ಕರ್ತವ್ಯಬುದ್ಧಿಯನ್ನೂ ಕೊಟ್ಟಿರುವನು. ನಾವು ವಿಚಾರದಿಂದ ಯೋಗ್ಯವಾದದ್ದನ್ನೇ ಮಾಡಬೇಕು. ಇದರ ಮೇಲೆ ದೇವರ ಇಚ್ಛೆಯು. ಬಾ, ಅಪ್ಪಾ, ಒಳಗೆ ಬಾ. ಇಂದಿನ ದಿವಸ ನಿನ್ನ ಯುದ್ಧದ ಉಡುಪುಗಳನ್ನು ನಾನೇ ಹಾಕುತ್ತೇನೆ. ನೀನು ನಮ್ಮ ಸೈನ್ಯದ ಮಧ್ಯದಲ್ಲಿ ಹೋಗಿ ನಿಂತರೆ, ನಿನ್ನನ್ನು ನೋಡಿ ನಿನ್ನ ವಚನಗಳನ್ನು ಕೇಳಿ, ಅದಾವ ಮುಸಲ್ಮಾನ ಸೈನಿಕನು ಉತ್ಸಾಹವು ಭಂಗವಾಗಿ ಹೇಡಿಯಂತೆ ಶರಣುಹೋಗುವನು? ಎಲ್ಲರೂ ನಿಶ್ಚಯವಾಗಿ ಕೀರ್ತಿಬರುವಂತೆ ಯುದ್ಧ ಮಾಡುವರು. ಅಪ್ಪಾ, ನೀನು ಭಾವೀ ಸಾಮ್ರಾಟನಲ್ಲವೇ?

೭

ಪೂರ್ವದಿಕ್ಕಿನ ಆಕಾಶದಲ್ಲಿ ಉಷಃಕಾಲದ ಅರುಣಪ್ರಕಾಶವು ಸೂಚಿತವಾಗುವಷ್ಟರಲ್ಲಿ ಭಾದುಡೀ ಕೋಟೆಯಲ್ಲಿ ಯುದ್ಧದ ಸಿದ್ಧತೆಯ ಸೂಚನೆಯನ್ನು ಜನರಿಗೆ ತಿಳಿಸಲಿಕ್ಕೆ ನಗಾರಿಯು ಬಾರಿಸಲ್ಪಟ್ಟಿತು. ಪ್ರತಿಯೊಬ್ಬ ಪುರುಷನಲ್ಲಿ ಆನಂದ-ಉತ್ಸಾಹಗಳ ಹೆಚ್ಚಳಿಕೆಯು. ಎಲ್ಲರೂ ಮನಃಪೂರ್ವಕ ಯುದ್ಧಸಿದ್ಧತೆಗೊಳಿಸುವದರಲ್ಲಿ ಮಗ್ನರು.

ಪಂಚಪಂಚ ಉಷಃಕಾಲದಲ್ಲಿಯೇ ತ್ರಿಪುರಾ ರಾಣಿಯು ಸೊಸೆಯಾದ ಕಿಶೋರಿಯನ್ನು ಕರಕೊಂಡು ದೇವಿಯ ಮಂದಿರಕ್ಕೆ ಹೊರಟಳು. ಇವತ್ತಿನ ದಿವಸ ಉಷಃಕಾಲಕ್ಕೆ ರಾಣಿಯ ಅಪ್ಪಣೆಯ ಮೇರೆಗೆ ರುದ್ರಾಭಿಷೇಕವು ಆರಂಭವಾಗಿತ್ತು. ಎಲ್ಲರೂ ತಮ್ಮ ತಮ್ಮ ಕಾರ್ಯವನ್ನು ದಕ್ಷತೆಯಿಂದ ಮಾಡುತ್ತಿದ್ದರು. ಯುವರಾಜ ಯದುನಾರಾಯಣನು ಇದೇ ಮೊದಲು ಸೇನಾಪತಿಯ ಕಾರ್ಯವನ್ನು ವಹಿಸಿದ್ದು; ಕಾರಣ ಇಂದಿನ ಪೂಜೆಯು ವಿಶೇಷವು. ಮತ್ತು ರಾಣಿಯು ಕಿಶೋರಿಯನ್ನು ಕರೆದುಕೊಂಡು ಬಂದಿದ್ದಳು.

ಅಭಿಷೇಕದನಂತರ ಮಹಾಪೂಜೆ, ಮಂತ್ರಾಕ್ಷತೆ, ಆರತಿ ಮೊದಲಾದ ಎಲ್ಲ ವಿಧಿಗಳೂ ಮುಗಿದವು. ಎಲ್ಲರೂ ತಮ್ಮ ತಮ್ಮ ನಿಜ ಕಾಮನಾಪೂರ್ತಿ ಮಾಡಬೇಕೆಂದು ಬೇಡಿಕೊಳ್ಳುವಾಗ ರಾಣಿಯೂ ಕಿಶೋರಿಯೂ ಸಾಷ್ಟಾಂಗ ನಮಸ್ಕಾರ ಮಾಡಿ ಮನದಲ್ಲಿಯ ಅಭೀಷ್ಟವನ್ನು ಬೇಡಿಕೊಂಡರು; ಆದರೆ ಇಬ್ಬರ ಮುಖದಲ್ಲಿಯೂ ಉತ್ಸಾಹವಿಲ್ಲ ಮನಸ್ಸು ಚಂಚಲವು. ಇಬ್ಬರ ಮುಖವನ್ನೊಬ್ಬರು ನೋಡಿದರು ಇಬ್ಬರಿಗೂ ಸಮಾಧಾನವಾಗಲಿಲ್ಲ ಅವರು ತಮ್ಮ ಪತಿಗಳು ಯುದ್ಧಕ್ಕೆ ಹೋಗುವದರಿಂದ ಮನಸ್ಸು ಚಂಚಲವಾಗಿ ಹೀಗಾಯಿತೆಂದು ಭಾವಿಸಿಕೊಂಡು ದೇವಿಯ ತೀರ್ಥ-ಪ್ರಸಾದ ಸ್ವೀಕರಿಸಿ, ಮನೆಗೆ ಹೋದರು.

ಯುದ್ಧಕ್ಕೆ ಹೊರಡದ ಪೂರ್ವದಲ್ಲಿ ಯದುನಾರಾಯಣನು ತಾಯಿಯ ಆಶೀರ್ವಾದ ಪಡೆಯಲು ಬಂದನು. ತ್ರಿಪುರಾರಾಣಿಯು ಮಗನು ನಮಸ್ಕಾರ ಮಾಡಿದ ಕೂಡಲೆ:—ಬಾ, ಮಗನೇ ಬಾ. ಯುದ್ಧದಲ್ಲಿ ವಿಜಯುವನ್ನು ಹೊಂದಿ ರಾಜ ರಾಜೇಶ್ವರನಾಗು. ದೇವಿಯ ಚರಣತೀರ್ಥವನ್ನೂ ಪ್ರಸಾದವನ್ನೂ ಸ್ವೀಕಾರಮಾಡು, ಎಂದಳು.

ಕುಮಾರನು ತೀರ್ಥಪ್ರಾಶನ ಮಾಡಿ, ನಿರ್ಮಾಲ್ಯವನ್ನು ಉತ್ತರೀಯದಲ್ಲಿ ಕಟ್ಟಿಕೊಂಡು:—ಅವ್ವಾ, ಎಂದನು.

ತ್ರಿಪುರಾ:—ಯಾಕೆ?

ಕುಮಾರನು ತಲೆ ಬಗ್ಗಿಸಿಕೊಂಡು ಸುಮ್ಮನೆ ಕುಳಿತನು. ಮಾತೆಯು ಮುಗುಳು ನಗೆಯಿಂದ:—ನಿನಗೆ ಮತ್ತೇನು ಸಂಶಯ ಬಂತು? ನಾನು ದೇವಿಯ ವರವನ್ನೇ ಕೊಟ್ಟಿರುವೆನು. ಇನ್ನು ಬೇರೆ ವಿಚಾರವನ್ನೇ ಮಾಡಬೇಡ. ನೀನು ನಿಶ್ಚಯವಾಗಿ ಜಯವನ್ನು ಪಡೆಯುವಿ; ಮತ್ತು ಸಾರ್ವಭೌಮನಾಗುವಿ.

ಕುಮಾರನು ನಗುತ್ತ:—ಅವ್ವಾ, ನಿನ್ನ ಆಶೀರ್ವಾದದ ಕಡೆಯ ವಾಕ್ಯವು ವಿಚಿತ್ರವೆನಿಸುತ್ತದೆ.

ತ್ರಿಪುರಾ:—ಅದೇಕೆ? ಇದಕ್ಕಿಂತ ಹೆಚ್ಚಿನ ಆಶೀರ್ವಾದವನ್ನು ಏನು ಕೊಡಬೇಕು?

ಕುಮಾರ:—ಈ ಆಶೀರ್ವಾದವು ಯೋಗ್ಯವಾದೀತೇನು?

ತ್ರಿಪುರಾ:—ನಿನ್ನ ಮಾತಿನ ಅರ್ಥವು ನನಗೆ ತಿಳಿಯಲೊಲ್ಲದು; ಸ್ಪಷ್ಟವಾಗಿ ಹೇಳು.

ಕುಮಾರ:—ಅವ್ವಾ, ನಾವು ಅಜಿಮುಶಹನಿಗೆ ಸಹಾಯ ಮಾಡಲು ಹೊರಟಿರುತ್ತೇವೆ. ರಾಜ್ಯವನ್ನು ದೊರಕಿಸುವದು ನನ್ನ ಮತ್ತು ಪಿತನ ಇಚ್ಛೆ ಇಲ್ಲ. ಹಾಗೆ ಮಾಡಿದರೆ ಯಾರು ರಕ್ಷಕರೋ, ಅವರೇ ಭಕ್ಷಕರಾಗಬೇಕಾಗುವದು. ಹಾಗಾಗುವದು ಯೋಗ್ಯವೇ? ಅಜಿಮನು ಗೌಡಸಿಂಹಾಸನದ ನ್ಯಾಯದ ಹಕ್ಕುದಾರನು; ಆದರೆ ಶತ್ರುಗಳ ಕಾರಸ್ಥಾನದಿಂದ ರಾಜ್ಯ ಕಳಕೊಂಡು ವಿಪತ್ತಿಗೆ ಗುರಿಯಾಗಿರುವನು. ನಾವು ಅಂಥ ವಿಪದ್ಗ್ರಸ್ತನಿಗೆ ಸಹಾಯ ಮಾಡಲಿಕ್ಕೆ ಹೊರಟಿರುವೆವಲ್ಲದೆ, ಸಾಮ್ರಾಜ್ಯಾಕಾಂಕ್ಷೆಯು ನಮಗಿಲ್ಲ. ನಾವು ಅನ್ಯಾಯಾತಿಕ್ರಮಣಕ್ಕೆ ಅಡ್ಡಿಮಾಡಿ, ಅಜಿಮನ ರಾಜ್ಯವನ್ನು ಅವನಿಗೆ ಕೊಡಿಸಲಿಕ್ಕೆ ಹೋಗುತ್ತೇವೆ. ಅಜಿಮುಶಹನು ನಮ್ಮ ಮೇಲೆ ಭರವಸೆಯನ್ನು ಇಟ್ಟಿರುವನು. ಹೀಗಿದ್ದು, ಅದರ ಮೂಲಕ್ಕೆ ನಾವು ವಿಶ್ವಾಸಘಾತ ಮಾಡುವಂಥ ಆಶೀರ್ವಾದವನ್ನು ಕೊಡಬೇಡ. ಅವ್ವಾ, ವಿಜಯವನ್ನು ಹೊಂದು! ಇಷ್ಟೇ ಆಶೀರ್ವಾದ ಮಾಡು.

ಮಗನ ಮಾತು ತಾಯಿಯ ಮನಸ್ಸಿಗೆ ಬರಲಿಲ್ಲ. ಅವಳು—ಯದ್ಧೊ,

ಇಂದು ನೀವು ಯುದ್ಧಕ್ಕೆ ಹೊರಟಿದ್ದುದರ ಉದ್ದೇಶವು ಮಹತ್ವವಾದದ್ದು; ಆದರೆ ಈ ವಿಷಯದಲ್ಲಿ ನಿಮ್ಮ ತಿಳುವಳಿಕೆಯು ತಪ್ಪಾಗಿರುತ್ತದೆ. ಅದು ಎದುರಿಗಿದ್ದರೂ ನಿಮಗೆ ಕಾಣಿಸಲೊಲ್ಲದು! ಗೌಡವು ವಂಗೀಯ ಜನರದೋ-ಮುಸಲ್ಮಾನರದೋ? ಗೌಡಸಿಂಹಾಸನವು ನಿಜವಾಗಿ ಯಾರ ಹಕ್ಕಿನದು? * ಗೌಡವು ಬಂಗಾಲೀ ಜನರದು. ಅಂದಬಳಿಕ ಅದರ ಮೇಲೆ ಅವರ ಹಕ್ಕು ಮುಸಲ್ಮಾನರಿಗಿಂತ ಹೆಚ್ಚಿರುತ್ತದೆ. ಎಷ್ಟೋ ಶತಮಾನಗಳ ಹಿಂದೆ ಸುಂದರವನವನ್ನು ನಾಶ ಮಾಡಿ, ಸಮುದ್ರವನ್ನು ಹಿಂದಕ್ಕಟ್ಟಿ, ಈ ಪ್ರಕಾರ ಫಲವತ್ತರವಾದ ಭೂಮಿಯನ್ನು ಮಾಡಿದವರು ಯಾರು? ಅವರು ಈ ಭೂಮಿಯನ್ನು ಸುವರ್ಣಮಯವಾಗಿ ಮಾಡಿದ್ದರಿಂದಲೇ ಮುಸಲ್ಮಾನರ ದೃಷ್ಟಿಯು ಇತ್ತ ಬಿದ್ದಿತಲ್ಲವೇ? ಹಿಂದೂಜನರು ಇದನ್ನೆಲ್ಲ ಮಾಡಿ ಭೂಮಿಗೆ 'ಮಾತೆ' ಎಂಬ ಗೌರವದ ಅಭಿಧಾನವನ್ನು ಕೊಟ್ಟರು. ವಸ್ತುಸ್ಥಿತಿಯು ಹೀಗಿದ್ದು, ಈ ಮುಸಲ್ಮಾನರು ನಡುವೆ ಬಂದು ಆತ್ಮಕಲಹ ಹಚ್ಚಿ, ಮೋಸದಿಂದ ರಾಜ್ಯವನ್ನು ತೆಕ್ಕೊಂಡಿದ್ದು, ನ್ಯಾಯವಾದ ಹಕ್ಕುದಾರರು ಮುಸಲ್ಮಾನರೆಂದು ನಿನ್ನಂಥ ತಿಳಿದವನು ಕೂಡ ಅಂದಬಳಿಕ, ಏನು ಹೇಳಬೇಕು? ಇದೆಂಥ ರಾಜನೀತಿಯು! ಯಾರು ಸಾಮ್ರಾಜ್ಯವನ್ನು ಸ್ಥಾಪಿಸುವರೋ ಅವರು ಅದರ ಒಡೆಯರು; ಸಾಮ್ರಾಜ್ಯವನ್ನು ಗೆದ್ದವರು ಅಲ್ಲ.

ತಾಯಿಯ ಮುಖದಿಂದ ಈ ಪ್ರಕಾರ ಸ್ವಜಾತಿ ಸಮರ್ಥನೆಯ ವಿಚಾರವನ್ನು ಕೇಳಿ, ಕುಮಾರನು ಆಶ್ಚರ್ಯಚಕಿತನಾದನು. ಇಂಥ ತೇಜೋಮಯ ವಿಚಾರಗಳನ್ನು ಎಂದೂ ಕೇಳಿದ್ದಿಲ್ಲ. ಈ ವರೆಗೆ ಅವಳು ವ್ರತ, ಉಪವಾಸ, ಪುರಾಣ ಮೊದಲಾದ ಧಾರ್ಮಿಕ ಕೃತ್ಯಗಳಲ್ಲಿಯೇ ಆಯುಷ್ಯವನ್ನು ಕಳೆಯುತ್ತ ಬಂದಿದ್ದಳು; ಮತ್ತು ಕೆಲವು ಪ್ರಸಂಗಗಳಲ್ಲಿ ಅವಳು ಹಿಂದೂಜನರಿಗಿಂತ ಮುಸಲ್ಮಾನರ ಪಕ್ಷವನ್ನೇ ಹೆಚ್ಚು ಸಮರ್ಥನೆ ಮಾಡಿದ್ದಳು. ಹೀಗಿದ್ದು, ಇಂದಿನ ತಾಯಿಯ ಮಾತುಗಳನ್ನು ಕೇಳಿ ಕುಮಾರನು ವಿಸ್ಮಯಗೊಂಡನು; ಮತ್ತು ಈ ನವೀನ ವಿಚಾರವು ಯೋಗ್ಯವಿದ್ದು ಅದಕ್ಕೆ ಪ್ರತಿಯಾಗಿ ಮಾತಾಡುವ ಸಾಮರ್ಥ್ಯವು ಅವನಿಗಿದ್ದಿಲ್ಲ. ಆದರೂ ಅವನು — "ಅಮ್ಮಾ, ಹಾಗಾದರೆ ಮುಸಲ್ಮಾನರು ಹಿಂದೂಜನರ ಶತ್ರುಗಳೇನು?" ಎಂದು ಕೇಳಿದನು.

"ಹಿಂದು ಬಗೆಯಿಂದ ವಿಚಾರ ಮಾಡಿದರೆ, ಹಾಗೇ ಅನ್ನಬೇಕಾಗುತ್ತದೆ. ನೋಡು, ಅವರು ಎಷ್ಟು ಬಗೆಯಿಂದ ಹಿಂದೂಜನರ ದುರ್ದೆಶೆ ಮಾಡಿರುತ್ತಾರೆ? ಮಾತು ಮಾತಿಗೆ ಹಿಂದೂದೇವಾಲಯಗಳ ನಾಶವು; ಧರ್ಮವನ್ನು ಕೆಡಿಸುವದು; ಸ್ತ್ರೀಯರ ಮಾನಭಂಗ ಮಾಡುವದು. ನೋಡು! ನೀನೇ ವಿಚಾರ ಮಾಡು! ಪರಧರ್ಮವನ್ನು ಈ ಪ್ರಕಾರ ದ್ವೇಷ ಮಾಡಬೇಕೆಂದು ಯಾವ ಧರ್ಮದಲ್ಲಿಯಾದರೂ ಹೇಳಿರಬಹುದೇನು? ಇನ್ನು ಅವರಲ್ಲಿಯು ಕೆಲವರು ಕುಹಕರು ತಮ್ಮ ಮಶೀದೆಗಳ ಮುಂದೆ ವಾದ್ಯ ಬಾರಿಸಬಾರದು, ಮೊದಲಾದ ವಿಚಾರಗಳನ್ನು ತೆಗೆಯ ಹತ್ತಿರುವರು. ಅವರು ಹಿಂದೂಧರ್ಮವನ್ನು ರಸಾತಳಕ್ಕೆ ಒತ್ತಬೇಕೆಂದು ಮಾಡಿರುವರು. ಅವರು ನಮ್ಮ ರಾಜ್ಯವನ್ನೂ, ಐಶ್ವರ್ಯವನ್ನೂ ಅಪಹರಿಸಿದ್ದು, ಧರ್ಮ ಒಂದು ಮಾತ್ರ ಭಗ್ನಾವಸ್ಥೆಯಲ್ಲಿ ಇದೆ. ಅದನ್ನೂ ಸಹ ಸಮುದ್ರದಲ್ಲಿ ಮುಳುಗಿಸುವ ವಿಚಾರವು! ಹಿಂದೂಜನರ ಪರಧರ್ಮ ಸಹಾನುಭೂತಿಯ ಲಾಭವನ್ನು ಈ ಪ್ರಕಾರ ತೆಗೆದುಕೊಳ್ಳುತ್ತಿರುವರು. ಅಂದಬಳಿಕ ಅವರು ಶತ್ರುಗಳೇ ಸರಿ."

ಕುಮಾರ:—ಅಪ್ಪಾ, ಈ ಎಲ್ಲ ಅನರ್ಥಕ್ಕೆ ಹದಿನಾರು ಆಣೆ ಭಾಗವು ಮುಸಲ್ಮಾನರ ದೋಷವೇ ಏನು? ಹಿಂದೂಜನರ ತಪ್ಪಿಲ್ಲವೇ?

ತ್ರಿಪುರಾ:—ಅವರ ತಪ್ಪು ಸಾವಿರ ಇರಲಿ; ಆದರೂ ನಾನು ಮುಸಲ್ಮಾನರ ಸಮರ್ಥನೆಯನ್ನು ಮಾಡಲಾರೆನು. ನಾವು ಉದಾಸೀನರಾದ ವೇಳೆಯನ್ನು ಸಾಧಿಸಿ, ಯಾರಾದರೂ ಬಂದು ನಮ್ಮ ಕುತ್ತಿಗೆಗೆ ಚೂರೀ ಹಾಕಿದರೆ, ನಾವು ಸ್ವಸ್ಥವಾಗಿ ಕೂಡಬೇಕೇನು? ಯದೂ, ನೀನೇ ಹೇಳು; ಮುಸಲ್ಮಾನರು ನಮ್ಮ ದೇಶಕ್ಕೆ ಬಂದಿರುವರೆಂದು ತಿಳಿದು ನಾವು ಅವರ ದಾಸಾನುದಾಸರೇಕೆ ಆಗಬೇಕು? ಅವರಿಗೆ ನಮ್ಮ ದೇಶದ, ಧರ್ಮದ, ಸಮಾಜದ ಬಗ್ಗೆ ಏನು ತಿಳುವಳಿಕೆ ಇರುವದು? ನಾವು ಅವರ ಅಧೀನದಲ್ಲಿಯೇ ಇರತಕ್ಕ ಕಾರಣವೇನು? ನಿಮ್ಮ ಮಾವನು ಹೇಳಿದಂತೆ ಅವರು ಆತ್ಮ ಕಲಹದಿಂದ ನಿರ್ವಿಣ್ಣರಾದ ಸಮಯವನ್ನು ಸಾಧಿಸಿ, ನಮ್ಮ ಗತವೈಭವವನ್ನು ಸಂಪಾದಿಸುವದೇ ಯೋಗ್ಯವು! ಹಿಂದೂದೇಶವು ಹಿಂದುಗಳದೇ ಆಗಲಿ, ಹಿಂದೂಧರ್ಮವು ಗೌರವದಿಂದ ಮೆರೆಯಲಿ. ಈ ಪ್ರಕಾರ ಪ್ರತಿಯೊಬ್ಬ ಹಿಂದುವು ಅಪೇಕ್ಷೆಯನ್ನು ತಾಳುವದು ಯೋಗ್ಯವು.

'ಹಾಗಾದರೆ ಮುಸಲ್ಮಾನರು?'

'ಅವರೂ ಇರಲಿ.'

'ಅವರು ಹೇಗೆ ಇರಬೇಕು? ಅದೂ ಒಂದು ದೊಡ್ಡ ಜನಾಂಗವು!'

'ದೊಡ್ಡ ಸಮಾಜವೆಂದು ಹಿಂದುಗಳ ತಲೆಯ ಮೇಲೆ ಕೂಡಬೇಕೇನು? ಅವರು ಹಿಂದುಗಳ ಸಂಗಡ ಸಹಕಾರದಿಂದ ಇರಬಹುದು. ಅವರ ವಿಷಯದಲ್ಲಿ ಹಿಂದೂ ಜನರ ಸಹಾನುಭೂತಿಯು ಯಾವಾಗಲೂ ಜಾಗೃತವಾಗಿರುವದು. ಹೋಗು, ಕುಮಾರ, ಬಹಳ ಹೊತ್ತಾಯಿತು. ದೇವಿಯ ದಯದಿಂದ ಕೀರ್ತಿ ಪಡೆಯುವಿ.'

ನವಕಿಶೋರಿಯು ವೃದು ಮಂದಗಮನದಿಂದ ಪತಿಯ ಚರಣಕ್ಕೆರಗಿದಳು. ಆತ್ಮವಿಚಾರಮಗ್ನನಾದ ಯದುನಾರಾಯಣನು ಪತ್ನಿಯ ಪಾದಸ್ಪರ್ಶದಿಂದ ಚಮಕಿತನಾಗಿ ಕೆಳಗೆ ನೋಡಿದನು. ಕಿಶೋರಿಯು ಚರಣವನ್ನು ಹಿಡಿದುಕೊಂಡು ಕುಳಿತಿದ್ದಳು. ಅವನು ಆದರದಿಂದ ಪತ್ನಿಯನ್ನು ಎಬ್ಬಿಸಿ ಗಲ್ಲವನ್ನು ಹಿಡಿದು ಮಧುರವಾದ ಚುಂಬನವನ್ನಿತ್ತನು; ಆದರೆ ನವಕಿಶೋರಿಯ ನೇತ್ರದ್ವಯಗಳು ಅಶ್ರುಪೂರಿತವು. ಮುಖವು ನಿಸ್ತೇಜವು. ಕುಮಾರನು ಆಶ್ಚರ್ಯದಿಂದ:—'ಇದೇನು, ಕಿಶೋರಿ, ಅಳುವೆ ಏಕೆ?'

ದುಃಖವು ಒತ್ತರಿಸಿ ಬಂದು ಕುತ್ತಿಗೆಯು ಬಿಗಿಯಿತು. ಅಕಾಲ ವೃಷ್ಟಿಯು ಜೋರಾಯಿತು. ಕುಮಾರನು ಪ್ರೇಮದಿಂದ ಅವಳ ಮುಂಗೂದಲುಗಳನ್ನು ತೀಡುತ್ತ:—"ಹುಚ್ಚೀ, ಇದು ಅಳುವ ಸಮಯವೇ? ಇಂಥ ಪ್ರಸಂಗದಲ್ಲಿ ಧೈರ್ಯಗೆಟ್ಟರೆ ಹೇಗೆ? ನಾನು ವಿಜಯಾಕಾಂಕ್ಷಿಯಾಗಿ ಹೊರಟರಲು, ನಗೆಮುಖದಿಂದ ಅನುಜ್ಞೆಯನ್ನು ಕೊಡಬೇಕಲ್ಲವೆ? ಅಳುಮೋರೆಯಿಂದ ನನಗೆ ಹೋಗೆನ್ನುವಿಯಾ? ಕ್ಷತ್ರಿಯ ಕನ್ಯೆಯಾಗಿದ್ದು, ಕರ್ತವ್ಯವನ್ನು ಮರೆಯಬೇಕೆ?"

ಕಿಶೋರಿಯು ಕಷ್ಟದಿಂದ ದುಃಖವನ್ನು ನುಂಗಿದಳು; ಆದರೆ ಮಾತು ಮಾತ್ರ ಹೊರಡಲಿಲ್ಲ. ಪುನಃ ಕುಮಾರನು:—"ಇಂದು ಮನಸ್ಸು ಇಷ್ಟು ಚಂಚಲವಾಗಲು ಕಾರಣವಾದರೂ ಏನು?" ಎಂದನು.

ಕಿಶೋರಿಯು ಭಯದಿಂದ:—ಈ ಯುದ್ಧಕ್ಕೆ ನೀವು ಹೋಗದಿದ್ದರೆ ನಡೆಯುವದಿಲ್ಲವೇನು?

ಯದು:—ನಿನ್ನ ಅಭಿಪ್ರಾಯವಾದರೂ ಏನು?

ಕಿಶೋರಿಯು ಬಿಕ್ಕಿ ಬಿಕ್ಕಿ ಅಳುತ್ತ ಪತಿಯ ಚರಣಗಳನ್ನು ಹಿಡಿದು ಕೊಂಡು ಕುಳಿತು:—"ನಾಥ, ಇಂದು ಮಾತ್ರ ನನ್ನನ್ನು ಕ್ಷಮಿಸಬೇಕು."

ಅವಳ ದೀನ ಮುಖಮುದ್ರೆಯಿಂದ ಪಾಷಾಣ ಹೃದಯವು ಕೂಡ ಕರಗಬೇಕು. ಕಿಶೋರಿಯು ಕ್ಷತ್ರಿಯ ಪತ್ನಿಯು; ತೇಜಸ್ವಿನಿಯಾದ ತ್ರಿಪುರಾದೇವಿಯ ಶಿಷ್ಯಳು. ಇಂಥವಳ ಮನಸ್ಸು ಚಲವಿಚಲವಾದ ಕಾರಣವೇನು? ಕುಮಾರನು ತನ್ನ ಉತ್ತರೀಯದಿಂದ ಅವಳ ಕಣ್ಣು ಒರಿಸುತ್ತ—"ನೀನು ಈ ವರೆಗೆ ನನ್ನ ಯಾವ ಕಾರ್ಯಕ್ಕೂ ಪ್ರತಿಯಾಗಿ ವರ್ತಿಸಿಲ್ಲ. ಇಂದು ಹೀಗೇಕೆ?"

ಕಿಶೋರಿ:—"ಇಂದು ವರ್ತಿಸಿರುವೆನು. ಇನ್ನು ಮುಂದೆ ಎಂದೂ ಪ್ರತಿ ಮಾತು ಸಹ ಆಡುವದಿಲ್ಲ."

ಯದು:—ಅದದ್ದಾದರೂ ಏನು?

ಕಿಶೋರಿ:—ಅದನ್ನು ನೀವು ಕೇಳಬಾರದು

ಯದು:—ಯುದ್ಧಕ್ಕೆ ಹೋಗಬಾರದೆಂಬುದೇ ಕಡೆಯ ಮಾತು, ಎಂದು ಹೇಳಿದಿ; ಈಗ ಮತ್ತೆ ಕೇಳಬಾರದೆಂದು ಅನ್ನುವಿಯಲ್ಲ?

ಕಿಶೋರಿ:—ಆ ವಿಷಯವನ್ನು ನೀವು ಕೇಳಬಾರದು.

ಯದು:—ಕೇಳಿದರೆ ಏನಾಗುವದು?

ಕಿಶೋರಿ:—ಭಯದಿಂದ ಸ್ತಬ್ಧರಾಗುವಿರಿ!

ಯದು:—ಕಿಶೋರೀ, ನಿನ್ನ ಪತಿಯು ಅಷ್ಟೊಂದು ಹೇಡಿಯೇನು?

ಕಿಶೋರಿ:—ಕಿಶೋರಿಯು ವೀರಪತ್ನಿ ಎಂಬುದನ್ನು ಬಲ್ಲಳು. ಆದರೂ ಆ ವಿಷಯವು ಭಯಾನಕವಾದದ್ದು.

ಯದು:—ಅದನ್ನೇ ಕೇಳಲಿಚ್ಛಿಸುವೆನು.

ಕಿಶೋರಿ:—ನಾನು ಇಂದು ಪ್ರಾತಃಕಾಲದಲ್ಲಿ ದೇವಿಯ ಮಂದಿರಕ್ಕೆ ಹೋಗಿದ್ದೆನು. ಅಲ್ಲಿ ಪೂಜೆ-ಆರತಿಗಳು ಮುಗಿದ ಮೇಲೆ ಸಾಷ್ಟಾಂಗ ನಮಸ್ಕಾರ ಮಾಡಿ ದೇವಿಯ ಕಡೆಗೆ ನೋಡಿದೆನು. ಅವಳು ಮುಂದೆ ಮಾಡಿದ ತನ್ನ ವರದ ಹಸ್ತಗಳನ್ನು ಹಿಂದಕ್ಕೆ ತೆಗೆದುಕೊಂಡಳು. ಕ್ಷಣ ಕಾಲ ಕಣ್ಣುಮುಚ್ಚಿ ಪುನಃ ನೋಡಿದೆನು. ಮತ್ತೆ ಸ್ತ್ರೀ ಮುಂದೆ ಮಾಡಿದಳು.

ಯದು:—ಮುಂದೇನಾಯಿತು?

ಕಿಶೋರಿ:—ಮುಂದಿನ ಸಂಗತಿ ಭಯಾನಕವಿದೆ, ಕೇಳಬೇಡಿರಿ.

ಯದು:—ಅದನ್ನೇ ಹೇಳು. ನೀನು ಹೇಳಲಿಕ್ಕೆ ಒಪ್ಪಿರುವೆಯಲ್ಲವೇ?

ಕಿಶೋರಿಯು ಕ್ಷಣಕಾಲ ತಡೆದು ಪತಿಯ ಮುಖವನ್ನು ದಿಟ್ಟಿಸಿ ನೋಡಿ:—ಮುಂದೆ ದೇವಿಯ ಕೈಗಳು ನಡುಗಹತ್ತಿದವು; ಮತ್ತು ಅವಳ ಮುಖದಿಂದ ಕಿಡಿಗಳು ಉದುರ ಹತ್ತಿದವು!

ಕಿಶೋರಿಯು ನಡುಗ ಹತ್ತಿದಳು. ಕುಮಾರನು ಅವಳನ್ನು ಅಪ್ಪಿಕೊಂಡು ಬೆನ್ನಮೇಲೆ ಕೈಯಾಡಿಸುತ್ತ:-ಇದೇ ಭಯಂಕರವೇನು? ಪ್ರಿಯೆ, ಮನಸ್ಸಿಗೆ ತಿಳಿಯದ ಪಾಪವಿಲ್ಲವಷ್ಟೇ? ಅಂದಬಳಿಕ ಯಾವ ಪಾಪವನ್ನೂ ಮಾಡದ ನಮ್ಮ ಮೇಲೆ ದೇವಿಯ ಕ್ರೋಧವುಂಟಾಗಲು ಕಾರಣವಿಲ್ಲ. ನೀನು ಪೂರ್ಣ ಗರ್ಭಿಣಿಯು. ಶರೀರವು ದುರ್ಬಲವು. ಆದ್ದರಿಂದ ನೀನು ಅಂಜಿಕೆಯಿಂದ ನಡುಗಿರುವಿ. ನಿನಗೆ ದೇವರ ಕೈಗಳೇ ನಡುಗಿದಂತೆ ಭಾಸವಾಗಿದೆ. ಕಿಶೋರೀ, ಮಾತೆಯು ನನಗೆ ರಾಜರಾಜೇಶ್ವರನಾಗೆಂದು ಆಶೀರ್ವದಿಸಿರುವಳು; ಅಂದಬಳಿಕ ನೀನು ಭಾವೀ ರಾಜಮಾತೆಯಲ್ಲವೇ? ರಾಜಮಹಿಷಿಯಲ್ಲವೇ?

ಕಿಶೋರಿ:-ನಾಥ,ನನ್ನ ಅಪರಾಧವನ್ನು ಕ್ಷಮಿಸಿರಿ. ರಾಜಮಹಿಷಿಯು ಸಾಮಾನ್ಯ ಸ್ತ್ರೀಯರಂತೆ ದೈವದ ಮೇಲೆ ವಿಶ್ವಾಸವಿಡುವದು ಯೋಗ್ಯವಲ್ಲವೆಂಬದನ್ನು ಮರೆತಿದ್ದೆನು. ಪ್ರಭೋ, ನೀವು ನಿಮ್ಮ ಪಾದಧೂಳಿಯ ಸಂಗಡ ಅಮಿತ ಧೈರ್ಯವನ್ನೂ ಕೊಡಿರಿ, ಎಂದು ಮತ್ತೆ ಚರಣಕ್ಕೆರಗಿದಳು.

ಯದು:—“ಪ್ರಿಯೇ, ನಿನ್ನಿಂದ ವಂಶವು ಉಜ್ವಲವಾಗಲಿ!” ಎಂದು ಆಶೀರ್ವದಿಸಿದನು. ಅಷ್ಟರಲ್ಲಿ ತ್ರಿಪುರಾದೇವಿಯು ಇತ್ತ ಕಡೆಗೆ ಬಂದಳು. ಯದುನಾರಾಯಣನು ಹೊರಟು ಹೋದನು. ಕಿಶೋರಿಯು ಪತಿಯು ಕಣ್ಮರೆಯಾಗುವವರೆಗೆ ಆ ಕಡೆಗೆ ನೋಡುತ್ತ ನಿಂತಳು.

---

೪

ದೂತನ ಮಾತು ನಿಜವಾಯಿತು. ಮುಂದುಗಡೆಯಿಂದ ಪ್ರಬಲವಾದ ಸೈನ್ಯವು ಬಂದು ಅಜಿಮುಶಹನ ಛಾವಣಿಯನ್ನು ಮುತ್ತಿತು. ಆ ಮುತ್ತಿಗೆಯನ್ನು ಭೇದಿಸಿ ಪಾರಾಗುವದು ಅವನಿಗೆ ಶಕ್ಯವಿದ್ದಿಲ್ಲ; ಆದರೆ ಅಜಿಮುಶಹನು ಸಾಮಾನ್ಯನಲ್ಲ. ವೀರೋಚಿತ ಧೈರ್ಯ, ರಣನೈಪುಣ್ಯಗಳು ಅವನಲ್ಲಿ ಇದ್ದವು. ಅವನು ತನ್ನ ಸೈನ್ಯವನ್ನು ಮೂರು ಭಾಗಗಳನ್ನು ಮಾಡಿ, ಒಂದು ಭಾಗವನ್ನು ತಾನು, ಉಳಿದೆರಡು ಭಾಗಗಳನ್ನು ಗುಣರಾಮ

ರಾಯ ಹಾಗೂ ವೀರ ಅಲ್ಲಿಯ ಕಡೆಗೆ ಕೊಟ್ಟು ಸಿದ್ಧನಾದನು. ನಸೆರಿ ತ್‌ನ ಸೈನ್ಯದಮುಂದೆ ಅಜಿಮನ ಸೈನ್ಯವು ಸಮುದ್ರದ ಮುಂದೆ ಕೆರೆಯ ಹಾಗೆ ಆಯಿತು.

ಅಶಮಾನೆಳ ಮಾತು ನಿಜವಾಯಿತು. ಶತ್ರುಗಳ ಆಕಸ್ಮಿಕ ಆಕ್ರ ಮಣದಿಂದ ಭೀತರಾಗಿ ಶರಣುಹೋಗಬೇಕೆಂದು ಮಾಡಿದ ಅಜಿಮನ ಸೈನಿಕರು ತಮ್ಮ ಅರಸನ ಉತ್ಸಾಹವಾಣಿಯನ್ನೂ ಉತ್ಸಾಹವನ್ನೂ ನೋಡಿ ತಮ್ಮ ಕೃತಘ್ನತೆಗೆ ಮನದಲ್ಲಿ ನಾಚಿಕೊಂಡು, ಇಮ್ಮಡಿ ಉತ್ಸಾಹದಿಂದ ಜೀವದ ಮೇಲೆ ಉದಾರರಾಗಿ ಯುದ್ಧಕ್ಕೆ ಸಿದ್ಧರಾದರು.

ಪ್ರತಿಪಕ್ಷಿಯ ಸೇನಾಪತಿಯಾದ ಕಾಶೀಮಖಾನನು ಅಪ್ರತಿಮ ರಣ ಶೂರನು. ಅವನ ಸೈನ್ಯವು ದುರ್ಜಯವೆಂದು ಪ್ರಸಿದ್ಧಿಯನ್ನು ಹೊಂದಿತ್ತು. ಅವನ ಯುದ್ಧ ಕೌಶಲ್ಯವು ವೈರಿಗಳ ಪಲಾಯನಕ್ಕೆ ಸಹ ಆಸ್ಪದ ಕೊಡು ತ್ತಿದ್ದಿಲ್ಲ. ಇಂಥ ಪ್ರಬಲ ಸೈನ್ಯದ ಮುಂದೆ ಅಜಿಮನ ಮುಷ್ಟಿಮೇಯ ಸೈನ್ಯವು ಮಾಡುವದಾದರೂ ಏನು?

ನೋಡ ನೋಡುವಷ್ಟರಲ್ಲಿ ಮರಣಕ್ಕೆ ಪಣಮಾಡಿದ ಅಜಿಮನ ಸೈನ್ಯವು ನಿಃಶೇಷವಾಗುತ್ತ ಬಂತು. ಅವನ ಇಬ್ಬರೂ ವಿಶ್ವಾಸಿಕ ಸೇನಾ ಪತಿಗಳು ಅಗಣಿತ ಶತ್ರುಸೈನ್ಯವ ನಾಶಮಾಡಿ ಮೃತಶತ್ರು ಸೈನ್ಯ ಪರ್ವತದ ಮೇಲೆ ಚಿರನಿದ್ರೆಯನ್ನು ಹೊಂದಿದರು ಈ ಪ್ರಬಲ ಯುದ್ಧದಿಂದ ರಣಾಂಗಣದಲ್ಲಿ ನೋಡಿದತ್ತ ಉರಿಯುವ ಅಗ್ನಿಕುಂಡಗಳೂ, ಛಿನ್ನವಿಚ್ಛಿನ್ನ ಮಾನವರ ಅವಯವಗಳೂ, ಭೀಷಣತೆಯನ್ನುಂಟು ಮಾಡಿದವು!

ಹಾಯ್! ಈ ಪ್ರಕಾರದ ತಾಂಡವ ಲೀಲೆಯಲ್ಲಿಯೇ ಮಾನವರ ಆತ್ಮಪ್ರತಿಷ್ಠೆ ಇರಬಹುದೇನು? ಈ ಪ್ರಕಾರ ಜೀವನ ಹತಿಯಾಗದೆ ಮಾನ ವನು ಆತ್ಮಪ್ರಧಾನವಾದ ವಿಜಯವನ್ನು ಹೊಂದುವದು ಅಶಕ್ಯವೇನು? ನೀತಿ, ಸಭ್ಯತೆ, ಆಧ್ಯಾತ್ಮಿಕ ವಿಚಾರ, ಭೂತದಯೆ ಮುಂತಾದವು ಇಂಥ ಪ್ರಸಂಗಗಳಲ್ಲಿ ಆಸನ್ನ ಮರಣೋನ್ಮುಖ ಸ್ಥಿತಿಯನ್ನು ಹೊಂದುವವು; ಮತ್ತು ಈ ಬೀಭತ್ಸ ನರ್ತನವು ಕೂಡ ಹಿಂದು ಪಕ್ಷದ ಧ್ವಂಸದ ಕೂಡ ಇಲ್ಲದಂತಾಗಿ, ಅದೇ ಮಾನವನು ಆಸುರೀ ಲೀಲೆಯಿಂದ ಆತ್ಮಪ್ರಧಾನ ವನ್ನು ಹೊಂದಿದ ಮರುಕ್ಷಣದಲ್ಲಿಯೇ ಹೊಸ ಸೃಷ್ಟಿಯ ಮಾನವನಂತೆ ಮತ್ತೆ ನೈತಿಕ ಉಪದೇಶ ಮಾಡುತ್ತ ಮೆರೆಯುವನು!

ಅಜಿಮನು ಅಶ್ವಾರೋಹಿಯಾಗಿ ಹತ್ತೆಂಟು ಜನ ಅನುಚರರೊಂದಿಗೆ ಕ್ಷತವಿಕ್ಷತ ದೇಹದಿಂದ ಗಾಯಹೊಂದಿದ ಹುಲಿಯಂತೆ ವೈರಿಗಳ ಮೇಲೆ ಏರಿ ಹೋಗುತ್ತಿದ್ದನು. ಅವನಿಗೆ ಜಯಾಶೆಯಂತೂ ಇದ್ದಿಲ್ಲ ಅವನು ತನ್ನ ವೈರಿಯಾದ ನಸೆರಿತ್‌ನನ್ನೇ ಹುಡುಕುತ್ತ, ಆತ್ಮರಕ್ಷಣೆ ಮಾಡಿ ಕೊಳ್ಳುತ್ತ ಅತ್ತಿತ್ತ ಓಡಾಡುತ್ತಿದ್ದನು; ಮತ್ತು ಮನಸ್ಸಿನಲ್ಲಿ:— "ದೇವರೇ, ನನ್ನ ವೈರಿಯ ಸೇಡು ತೀರಿಸಿಕೊಂಡ ಪರಕ್ಷಣದಲ್ಲಿಯೇ ನನ್ನ ಅಸುವನ್ನು ಹೀರು"ಎಂದು ಪ್ರಾರ್ಥಿಸುತ್ತಿದ್ದನು!

ಅಕಸ್ಮಾತ್ತಾಗಿ ಅಜಿಮನ ಎದುರಿಗೆ ಅವನ ಇಚ್ಛಿತ ಶಿಕಾರಿಯು. ಹಸಿದ ಹುಲಿಯು ಭಕ್ಷ್ಯವನ್ನು ನೋಡಿದಂತೆ ಅಜಿಮನಿಗಾಯಿತು. ಅವನು ದವಡೆಯನ್ನು ಕಚ್ಚಿ ಕರ್ಕಶಸ್ವರದಿಂದ:—ಬಾ, ನಸೆರಿತ್ ಬಾ. ಇನ್ನು ನಾನು ಮರಣಕ್ಕೆ ಅಂಜುವದಿಲ್ಲ ಗೌಡಸಿಂಹಾಸನವು ಹೇಗೆ ಅಜಿಮ ನದು ಅಲ್ಲವೋ, ಹಾಗೆ ನಸೆರಿತ್‌ನದೂ ಅಲ್ಲನೆಂದು ಜಗತ್ತಿಗೆ ತೋರಿಸು ವೆನು. ಇಕೋ, ನೋಡು. ಆತ್ಮರಕ್ಷಣೆಯನ್ನಾದರೂ ಮಾಡಿಕೋ, ಎಂದು ಗುರಿ ನೋಡಿ ಬರ್ಚಿಯನ್ನು ಒಗೆದನು. ಅದನ್ನು ತಡೆಯುವ ಸಾಮರ್ಥ್ಯವು ನಸೆರಿತ್‌ಶಹನದಲ್ಲ; ಮೇಲಾಗಿ ಅದು ಮರಣೋನ್ಮುಖ ವೀರನ ಕಡೆಯ ಆಕ್ರಮಣವು.

ನಸೆರಿತ್‌ಶಹನು ನಡಗುವ ಕೈಯಿಂದ ಪ್ರತಿಯಾಗಿ ಖಡ್ಗವನ್ನು ಒಗೆ ದನು. ಅದೇ ವೇಳೆಯಲ್ಲಿ ನಸೆರಿತ್‌ಶಹನ ಹಿಂದಿನಿಂದ ಒಂದು ಅವ್ಯರ್ಥ ಬಾಣವು ಬಂದು ಅಜಿಮನ ಶಸ್ತ್ರವನ್ನು ನಡುವೆ ತುಂಡು ಮಾಡಿತು; ಮತ್ತು ವಿಧಿಲಿಖಿತದಿಂದ ನಸೆರಿತನು ಕಂಪಿತಹಸ್ತದಿಂದ ಒಗೆದ ಶಸ್ತ್ರವು ಅಜಿಮನ ವಕ್ಷಸ್ಥಳವನ್ನು ಭೇದಿಸಿತು! ಅಜಿಮನು ನೆಲಕ್ಕೆ ಬಿದ್ದನು. ಅವನ ಉಳಿದ ಸೈನ್ಯವು ದಿಕ್ಕಾಪಾಲಾಯಿತು.

ಅಜಿಮನ ದೇಹವು ರಕ್ತಮಯವು ಸುಂದರವಾದ ಮುಖವು ಕಪ್ಪಾಗಹತ್ತಿತು. ಅವನ ಮಗ್ಗಲಿಗೆ ಕೈಯಲ್ಲಿ ಕತ್ತಿಯನ್ನು ಹಿಡಿದು ಕೊಂಡು ನಿಂತು ತಿರಸ್ಕಾರದಿಂದ ನಗುತ್ತ:—"ಗೌಡಸಿಂಹಾಸನವು ನಸೆ ರಿತ್‌ಶಹನದು. ಅಜಿಮನದಲ್ಲವೆಂದು ಈಗಾದರೂ ತಿಳಿಯಿತೇ? ನಿನ್ನ ಹಿಂದೂ ದೋಸ್ತರು ಎಲ್ಲಿರುವರು? ಕರೆ ಅವರನ್ನು. ಬಂದು ನಿನ್ನ ರಕ್ಷಣೆ ಮಾಡಲಿ? ಯಾಕೆ ನರಳುವಿ? ನಿದ್ದೆ ಹತ್ತಲೊಲ್ಲದೇನು? ತಡೆ, ನಿದ್ದೆ

ಹತ್ತುವಂತೆ ಮಾಡುತ್ತೇನೆ.''

ನಸೆರಿತನು ಹತ್ತರದಲ್ಲಿದ್ದ ಒಬ್ಬ ಸೈನಿಕನನ್ನು ಕರೆದು, ಅಜಿಮನ ಎದೆಯ ಮೇಲೆ ನಿಂತು ಎದೆಯಲ್ಲಿ ನಟ್ಟ ಖಡ್ಗವನ್ನು ಜೋರಿನಿಂದ ಕಿತ್ತ ಹೇಳಿದನು. ಸೈನಿಕನು:-ಹುಜೂರ, ಮಾಫ ಮಾಡಬೇಕು. ಆ ಕೆಲಸವು ನನ್ನಿಂದ ಆಗದು! ರಾಜಪುತ್ರರ ಎದೆಯ ಮೇಲೆ ನಿಲ್ಲುವಂಥ ಹೀನ ಕೆಲಸವು ನನ್ನಿಂದ ಆಗದು! ಎಂದನು.

ನಸೆರಿತನು ಕಣ್ಣು ಕೆಂಪಗೆ ಮಾಡಿ:—ಏನು? ನನ್ನ ಹುಕುಮಿನ ಅಮಾನ್ಯವೆ? ಬೇಇಮಾನ್, ಬೇಕೂಫ್.

ಸೈನಿಕ:—ಹುಜೂರ, ಮಾಫ ಮಾಡಬೇಕು. ನೀವು ನಿಮ್ಮ ಬಿಡಾರಕ್ಕೆ ಹೋಗಿರಿ. ಖಾನಸಾಹೇಬರ ಅಪ್ಪಣೆಯಂತೆ ನಾನು ಈ ಶಹಾಜಾದಾನ ದೇಹರಕ್ಷಣೆ ಮಾಡುವೆನು.

ಬಾದಶಹನು ಕ್ರೋಧದಿಂದ:—ಹೀಗೋ? ಹಾಗಾದರೆ ನಿನ್ನ ಜೀವವನ್ನು ಸಂಬಾಳಿಸಿಕೋ. ಮೊದಲು ಈ ನೀಚನನ್ನು ಕೊಂದು, ನಂತರ ನಿನ್ನ ವ್ಯವಸ್ಥೆ ಮಾಡುವೆನು, ಎಂದು ಕತ್ತಿಯನ್ನು ಹಿರಿದನು. ಸೈನಿಕನು ಗಾಬರಿಯಾದನು.

ಅಷ್ಟರಲ್ಲಿ:—'ಅಯ್ಯೋ, ಅಪ್ಪಾ!' ಎಂಬ ಸ್ತ್ರೀಯ ಆರ್ತಸ್ವರವು ಕೇಳಿತು. ಅಶಮಾನಳು ತಂದೆಯ ಪಾದಗಳ ಮೇಲೆ ಬಿದ್ದು ಶೋಕ ಮಾಡಹತ್ತಿದಳು. ಆವಳ ಆ ಕರುಣಯುಕ್ತ ಶೋಕವು ಪಾಷಾಣಹೃದಯದ ನಸೆರಿತನನ್ನೂ ಸಹ ಕ್ಷಣಕಾಲ ನಿಶ್ಚಲ ಮಾಡಿತು. ಒಂದು ಕ್ಷಣ ತಡೆದು ನಸೆರಿತನು:—ಅಹಹಾ! ಅಶಮಾನ್, ನೀನು ಮುಸಲ್ಮಾನರ ವಿರುದ್ಧವಾಗಿ ಹಿಂದುಗಳನ್ನು ಕೂಡಿಕೊಂಡು ಯುದ್ಧಕ್ಕೆ ಬಂದಿರುವಿಯಾ? ಬಾ, ನಿನ್ನ ಸೊಕ್ಕೂ ತೀರಲಿ!

ಅಶಮಾನ:—ನಿನ್ನ ವಾಂಛಿತವು ಪೂರ್ಣವಾಗಿರುವದಷ್ಟೇ? ಇನ್ನು ಮೇಲೆ ತಂದೆಯ ಚರಣಸನ್ನಿಧಿಯಲ್ಲಿ ಮನಸೋಕ್ತ ಅಳುವದಕ್ಕೆ ಪ್ರತಿಬಂಧಿಸಬೇಡ.

ನಸೆರಿತ್:—ಅಳು, ಬೇಕಾದಷ್ಟು ಅಳು; ಆದರೆ ಯುದ್ಧಭೂಮಿಯಲ್ಲಿ-ಮರಣೋನ್ಮುಖ ತಂದೆಯ ಬಳಿಯಲ್ಲಿ-ಅತ್ತರೆ ಏನಾಗುವದು? ನಿನ್ನ ತಂದೆಯ ಮಿತ್ರರಾದ ಹಿಂದುಗಳ ಮನೆ ಮನೆ ತಿರುಗುತ್ತ ಅತ್ತರೆ,

ಏನಾದರೂ ಉಪಯೋಗವಾದೀತು. ನಿನ್ನ ಮೇಲೆ ಫಾತಿಮಾಬೀಬಿಯು ಪ್ರೇಮವು ಬಹಳವೆಂದು ನಿನ್ನ ಮೇಲೆ ದಯ ತೋರಿಸಿರುವೆನು. ಇಲ್ಲದಿದ್ದರೆ...............

ಅಶಮಾನಳು ಕಾತರದೃಷ್ಟಿಯಿಂದ:—ಸುಮ್ಮನೆ ಈ ನಿರ್ಭಾಗ್ಯಳ ಮನಸ್ಸು ನೋಯಿಸುವದೇಕೆ? ದಯಮಾಡಿ ಬೇರೆ ಕಡೆಗೆ ಹೋಗು. ಗೌಡದ ಬಾದಶಹನಿಗೆ ಇಂಥ ಹೇಸಿ ಮಾತುಗಳು ಯೋಗ್ಯವಲ್ಲ; ಮತ್ತು ಇದು ಸಮಯವೂ ಅಲ್ಲ. ಇನ್ನು ನಿನ್ನ ಯಾವ ಮಾತಿಗೂ ಉತ್ತರ ಕೊಡೆನು, ಎಂದು ಮತ್ತೆ ಅಪ್ಪಾ! ಅಪ್ಪಾ!! ಏ ಅಪ್ಪಾ!!! ಎಂದಳು.

ನಸೆರಿತನು ವಿಕಟ ಹಾಸ್ಯಮಾಡಿ:—ಯಾಕೋ, ಮಾತಾಡಲೊಲ್ಲಿ? ಹ-ಹ-ಹ!! ನಿಮ್ಮಪ್ಪನಿಗೆ ಗಾಢನಿದ್ದೆ ಹತ್ತಿರುವದು. ಅಶಮಾನ್, ನೀನು ಎರಡೂ ಕೈಯಿಂದ ಶಂಖ ಹೊಡೆದರೂ ನಿಮ್ಮ ತಂದೆಯು ಏಳನು.

ಅಶಮಾನಳ ಕಣ್ಣು ಕೆಂಪಗೆ ಆದವು. ತುಟಿಗಳು ಬಲವಾಗಿ ಕಂಪಿಸ ತೊಡಗಿದವು. ಅವಳು ಹುಬ್ಬು ಗಂಟಿಕ್ಕಿ:—"ಎಲೈ ನೀನು ಕಟಕನು. ಮುಸಲ್ಮಾನೀ ಧರ್ಮಕ್ಕೆ ಕಲಂಕ ಸ್ವರೂಪನು"

ನಸೆರಿತನು ಕ್ರೋಧದಿಂದ:—"ಇನ್ನೂ ನಿನ್ನ ಸೊಕ್ಕು ಇಳಿದಿಲ್ಲವೇನು? ನೀನು ಈಗ ದಾಸಿಯ ದಾಸಿಗಿಂತಲೂ ಕಡೆ, ಎಂಬದು ಗೊತ್ತಿಲ್ಲವೇನು? ಇನ್ನು ನಿನ್ನನು ಕ್ಷಮಿಸುವದಿಲ್ಲ, ನಿನ್ನ ತಂದೆಯ ಹತ್ತರವೇ ಕಳಿಸುತ್ತೇನೆ. ನಿನಗೆ ಒಂದೇ ಲತ್ತಾಪ್ರಹಾರವು ಸಾಕು" ಎಂದು ಆವೇಶದಿಂದ ಮುಂದೆ ಬಂದನು.

ವೀರಕನ್ಯೆಯಾದ ಅಶಮಾನಳು ಕೂತಸ್ಥಳಬಿಟ್ಟು ಕದಲದೆ, ಕಕ್ಕನೆ ಶೂರತನವನ್ನು ತಿರಸ್ಕಾರದಿಂದ ನೋಡಹತ್ತಿದಳು! ನಸಿರಿತ್‌ನ ಪಾದವು ಅವಳ ಅಂಗಸ್ಪರ್ಶ ಮಾಡುವದರೊಳಗೆ ವಜ್ರಕಂಠಸ್ವರದಿಂದ—"ನಸೆರಿತ್ ಶಹಾ, ಸಾವಧಾನ" ಎಂಬ ಗುಡುಗು ಕೇಳಿತು. ಅವನು ಹಿಂದಿರುಗಿ ನೋಡಿದನು. ಬೆನ್ನ ಹಿಂದೆ ಕಾಶೀಮಖಾನನು. ಅವನು ಆಶ್ಚರ್ಯದಿಂದ:-"ಸೇನಾಪತಿಸಾಹೇಬ, ಇಂದು ನೀನೂ ನನ್ನ ಮಾನಖಂಡನೆ ಮಾಡುವಿಯಾ?" ಎಂದನು.

ಕಾಶೀಮ:—ನಾನು ನಿನಗೆ ಸಹಾಯ ಮಾಡಿದ್ದು ಮೂರ್ಖತನವೇ ಸರಿ. ನೀನೂ ಹಿಂದೂ ದ್ವೇಷಿ. ಇಷ್ಟೇ ಮಾತಿನ ಮೇಲೆ ಲಕ್ಷ್ಯವಿಟ್ಟು

ನಿನ್ನ ಮಾತು ಕೇಳಿದೆನು; ಆದರೆ ಇಷ್ಟು ಹೀನಪುರುಷನೆಂಬ ಭಾವನೆ ಇದ್ದಿಲ್ಲ. ಇರಲಿ. ಹೋಗಿರಿ, ನಿಮ್ಮ ಶಿಬಿರಕ್ಕೆ ಹೋಗಿರಿ. ಮರಣೋನ್ಮುಖ ವೀರನ ಮೇಲೆ ಮತ್ತು ಅಸಹಾಯಕ ಬಾಲಿಕೆಯ ಮೇಲೆ ಶೂರತನವೇ? ಕಾಸೀಮನು ಇಂಥ ಅನ್ಯಾಯವನ್ನು ದುರ್ಲಕ್ಷಿಸಿದರೆ......ಇರಲಿ. ಹೋಗಿರಿ, ಎಂದನು. ನಸೆರಿಶನು ಮುಖತಗ್ಗಿಸಿಕೊಂಡು ಹೋದನು.

ಖಾನನು ಅಶವಾನಳ ಕಡೆಗೆ ಸದಯ ದೃಷ್ಟಿಯಿಂದ ನೋಡುತ್ತ:--ಶಹಾಜಾದಿ, ಇಂದು ನಮ್ಮ ಸಲುವಾಗಿ ನೀವು ಅಪಮಾನವನ್ನು ಹೊಂದ ಬೇಕಾಯಿತು. ಈ ಬಗ್ಗೆ ನಮಗೆ ಬಹಳ ಪಶ್ಚಾತ್ತಾಪವಾಗಿದೆ. ನಮ್ಮ ಅಪರಾಧ ಕ್ಷಮಿಸಿರಿ. ನಿಮ್ಮ ತಂದೆಯ ಅಂತ್ಯಕಾಲವು ಸಮೀಪಿಸಿದೆ. ಅವನ ಅಂತ್ಯದ ಅಪೇಕ್ಷೆಯನ್ನು ಕೇಳಿಕೊಳ್ಳಬೇಕು. ನಾವು ದೂರ ಹೋಗುತ್ತೇವೆ, ಎಂದು ಸೈನಿಕರನ್ನು ಕರಕೊಂಡು ಹೋದನು. ಕಾಸೀ ಮನು ಹೃದಯವಾನನು, ಶೂರನು, ಧರ್ಮಾಭಿಮಾನಿಯು.

ಕಾಸೀಮನು ಒಂದು ಗಿಡದ ಬುಡದಲ್ಲಿ ಕುಳಿತು ಆತ್ಮಗತ ವಿಚಾರ ಮಾಡಹತ್ತಿದನು:—"ಇಂಥ ಹೀನ ವೃತ್ತಿಯವನಿಗೆ ಸಹಾಯ ಮಾಡಿ, ಮುಸಲ್ಮಾನೀ ಧರ್ಮದ ರಾಜ್ಯಪ್ರತಿಷ್ಠಾಪನೆಯನ್ನು ಬೆಳೆಯಿಸುವದು ಶಕ್ಯವೆ? ಇನ್ನೂ ಅನೇಕ ವಿಘ್ನಗಳಿವೆ. ರಾಜಾ ಗಣೇಶನಾರಾಯಣನು ಗೌಡರಾಜಧಾನಿಯನ್ನು ಸ್ವಾಧೀನಪಡಿಸಿಕೊಂಡಿರಬಹುದು. ಈ ಅವಿವೇಕ ಬಾದಶಹನಿಗೆ ರಾಜಧಾನಿಯನ್ನು ಬಿಟ್ಟು ಕದಲಬೇಡವೆಂದು ಪುನಃ ಪುನಃ ಹೇಳಿದರೂ ಕೇಳದೆ, ಮುಖ್ಯ ಸೈನ್ಯವನ್ನೆಲ್ಲ ತೆಗೆದುಕೊಂಡು ಬಂದಿರುವನು. ಮುನೀಮಖಾನನು ಉಳಿದ ನಿರುಪಯುಕ್ತ ಸೈನ್ಯದಿಂದ ಏನು ಮಾಡ ಬೇಕು? ಇಲ್ಲ, ಇನ್ನು ವಿಲಂಬ ಮಾಡಿ ಉಪಯೋಗವಿಲ್ಲ."

ಅಹಹಾ! ಶಹಾಜಾದಿಯ ಲಾವಣ್ಯವು ಎಂಥ ಮನೋಹರವು! ಎಂಥ ಕಮನೀಯತೆಯು! ಪಾಪ! ಈಗ್ಗೆ ಅವಳು ಅಸಹಾಯಳು; ಆದರೆ....ಈ ಕಾಸೀಮಖಾನನು ಇರುವ ವರೆಗೆ ಅವಳಿಗೆ ಕೇಡು ಬಗೆಯಲು ಯಾರು ಸಮರ್ಥರು?

ಆದರೆ ಈಗ ಮುಸಲ್ಮಾನರು ಹಿಂದುಗಳಿಗೆ ತಲೆಬೊಗ್ಗಿಸುವ ಪ್ರಸಂಗ ಬರುವ ಲಕ್ಷಣ ಕಾಣುತ್ತದೆ. ಎಲ್ಲ ಕಡೆಗೆ ಹಿಂದುಗಳಿಗೆ ಶುಭಚಿಹ್ನಗಳು ಕಾಣಿ ಸುವವು. ರಾಜನು ಗೌಡವನ್ನು ಆಕ್ರಮಿಸಿದ್ದರೆ, ಅದನ್ನು ತಿರುಗಿ ದೊರಕಿ

ಸುವದು ಕಠಿಣವು ಮುಸಲ್ಮಾನರಿಂದ ಪ್ರತಿಷ್ಠಿತವಾದ ಸಿಂಹಾಸನದ ಮೇಲೆ ಹಿಂದುಗಳು ಕೂಡಬೇಕೆ? ಪತನಗೌರವ ಸೂರ್ಯನು ಹಿಂದೂ ಮೇಘಾವೃತವಾಗಬೇಕೆ? ಮುಸಲ್ಮಾನರ ಶಕ್ತಿಯಿಂದ ಚೂರ್ಣವಾದ ಹಿಂದೂಗೌರವವನ್ನು ಪುನಃ ಅದೇ ಮುಸಲ್ಮಾನರು ಗೌರವಿಸಬೇಕೆ? ಆಗದು, ಈ ವಿಚಾರವು ಸಹ ನನಗೆ ಸಹನವಾಗದು. ಎಂದೂ ಹೀಗೆ ಆಗಗೊಡುವದಿಲ್ಲ.

ಆದರೆ ಇಷ್ಟು ಧೈರ್ಯದಿಂದ ಹೇಳುವದಾದರೂ ಹೇಗೆ? ರಾಜಾ ಗಣೇಶನಾರಾಯಣನು ಚತುರನು; ಅವನ ಪುತ್ರ ಯದುಕುಮಾರನು ವೀರನು. ಎಲ್ಲಕ್ಕೂ ಕಠಿಣವೆಂದರೆ, ರಾಜನು ಹಿಂದೂ ಮುಸಲ್ಮಾನರನ್ನು ಸಮದೃಷ್ಟಿ ಯಿಂದ ನೋಡುವದು. ಅವನ ಆ ಸಮದೃಷ್ಟಿಯಿಂದ ನಮ್ಮಂಥವರಿಗೆ ಕೂಡ ದಿಕ್ಕುತಪ್ಪಿದಂತಾಗುವದು. ವೀರ ಯದುನಾರಾಯಣನ ಸ್ಮರಣೆ ಯಾದರಂತೂ ತೀರಿತು. ಸಹೋದರನಂತೆ ಆಲಿಂಗಿಸಿಕೊಳ್ಳಬೇಕೆನ್ನಿಸು ವದು. ಅವನು ಮುಸಲ್ಮಾನನಾಗಿದ್ದರೆ ಮಾತ್ರ.........ಇಲ್ಲ, ದೇವರ ಇಚ್ಛೆ ಇಲ್ಲ ಭಾವೀಯುದ್ಧದಲ್ಲಿ ಇಬ್ಬರೂ ಪ್ರತಿದ್ವಂದಿಗಳಾಗಿ ಸನ್ಮುಖ ರಾಗಬೇಕಲ್ಲವೇ? ಆಗಲಿ ನಾನಾದರೂ ಅದನ್ನೇ ಬಯಸುವೆನು. ಕಾಸೀಮ, ಭಯಂಕರವಾದ ಪರೀಕ್ಷೆಯು ಎದುರಿಗೆ ಅದರಲ್ಲಿ ಜಯ ಪಡೆ ಯಲೇ ಬೇಕು. ಕಾಸೀಮನು ಚಿಂತೆಯಿಂದ ಅಡ್ಡಾಹತ್ತಿದನು.

††† ††† ††† †††

ನಸೆರಿತನು ತನ್ನ ದುರ್ನಡತೆಯಿಂದ ಸೈನಿಕರ ಮತ್ತು ಸೇನಾಪತಿಯ ಆದರ ವಂಚಿತನು ಕ್ಷುಣ್ಣಮನಸ್ಕನಾಗಿ ಶಿಬಿರದಲ್ಲಿ ಕುಳಿತಿದ್ದನು. ದೀನೆ ಯಾದ ಆಶಮಾನಳು ಮೂರ್ಛೆಯಲ್ಲಿರುವ ತಂದೆಯ ಪಾದಗಳನ್ನು ಆಲಿಂ ಗಿಸಿಕೊಂಡು ಶೋಕ ಮಾಡುತ್ತಿದ್ದಳು. ಅರುಣೋದಯದ ಸುಳಿಗಾಳಿ ಯಿಂದ ಅಜಿಮನಿಗೆ ಎಚ್ಚರ ಬಂತು. ಅವನು ಕಣ್ಣು ತೆರೆದನು. ಕೂಡಲೆ ಆಶಮಾನಳು:—ಅಪ್ಪಾ, ಎಂದು ಚೀರಿದಳು.

ಮಗಳ ಸ್ವರಪರಿಚಯದಿಂದ ಮೃತ್ಯುಗ್ರಸ್ತಮುಖದಲ್ಲಿ ಕೂಡ ಸಮಾ ಧಾನದ ಕಳೆ ಬಂತು. ಅವನು ಸಾವಕಾಶವಾಗಿ:—ಆಶಮಾನ್, ಮಗೂ, ಅಮ್ಮಾ ಆಶಮಾನ್, ಎಂದನು. ಅವಳು ತಂದೆಯ ಮುಖದ ಹತ್ತರ ಮುಖವನ್ನು ಹಿಡಿದು:—'ಅಪ್ಪಾ, ನಾನು ಇಲ್ಲಿಯೇ ಇರುವೆನು' ಎಂದಳು.

ಅಜಿಮನು ವಿಷಾದಪೂರ್ಣ ನಗೆಯಿಂದ:—"ಮಗೂ, ಇಷ್ಟೇಕೆ ಕಾತರಳಾಗಿರುವೆ? ಸುಜ್ಞಳಾದ ನಿನಗೆ ಹೇಳಬೇಕಾದ್ದೇನೂ ಇಲ್ಲ. ನನ್ನ ಕೆಲಸವು ಮುಗಿಯಿತು. ನಿನ್ನ ಕಾರ್ಯವನ್ನು ನೀನು ಮಾಡು. ಅಶ ಮಾನ್....ಈ ವರೆಗೆ ನಾನು ಒಂದು ಸ್ವಪ್ನವನ್ನು ನೋಡಿದೆನು. ಒಂದು ಹೂವಿನ ವಿಮಾನವು ನನ್ನನ್ನು ಕರೆದುಕೊಂಡು ಹೋಗಲು ಬಂತು. ನಾನು ಹೋಗಲಿಕ್ಕೆ ಒಪ್ಪಲಿಲ್ಲ. ಅಷ್ಟರಲ್ಲಿ ಆಕಾಶವಾಣಿಯಿಂದ:—'ನೀನು ಯಾರ ಸಲುವಾಗಿ ಚಿಂತಿಸುವಿಯೋ, ಅವಳು ನಿರಾಪದಳು; ಮತ್ತು ನಿನ್ನ ಶತ್ರುಗಳಿಂದಲೇ ಅವಳು ಗೌರವ ಹೊಂದುವಳು. ನಿನ್ನ ಶತ್ರುವಿನ ನಾಶ ಕನೇ ಅವಳ ಪತಿಯಾಗುವನು' ಅಶಮಾನ, ನೀನು ಯುದ್ಧಭೂಮಿಯಲ್ಲಿ ಯಾವ ಬಂಧುವಿನ ಸಹಾಯವನ್ನಾದರೂ ಹೊಂದಿದೆಯೇನು?

"ಹೌದು ಅಪ್ಪಾ"

"ಅವರು ಯಾರು? ಅಂಥ ಮಿತ್ರನು ಯಾರು?"

"ಕಾಸೀಮಖಾನ, ನಸೆರಿತನ ಸೇನಾಪತಿಯು."

"ಏನು, ಕಾಸೀಮನೇ? ಅವನು ಹಿಂದೂ ದ್ವೇಷಿಯು."

"ಅಪ್ಪಾ, ಕಾಸೀಮನು ನಸೆರಿತ್‌ನ ಮೇಲೆ ಕುಪಿತನಾಗಿರುವನು; ಮತ್ತು ಅವನು ಉದಾರನು."

"ಅವನು ಶೂರನು! ಅಂತೇ ನಸೆರಿತನು ಜಯಹೊಂದಿದನು. ಅವನು ಹಿಂದೂದ್ವೇಷಿಯು. ಇಷ್ಟರ ಸಲುವಾಗಿ ನಮ್ಮ ಪಕ್ಷ ಸ್ವೀಕರಿಸ ಲಿಲ್ಲ. ಅವನಿಂದ ಗೌರವವೇ? ದೇವರೇ, ಎಂಥ ವಿಚಿತ್ರ ಸಂಗತಿಯು!"

ರಕ್ತವು ಹೆಚ್ಚಾಗಿ ಹೊರಬಿದ್ದು ಅಜಿಮನು ಕಣ್ಣುಮುಚ್ಚಿ:-ಖುದಾ, ಅ—ಶ—ಮಾ—ನ—ಹಿಂ—ದೂ—ಮು—ಸ—ಲ್—ಮಾ—ನ— ಐ—ಕ್ಯ—ಆಯಿತು. ಅಜಿಮನ ಜೀವಜ್ಯೋತಿಯು ಈ ಪಾಪಮಯ ನಶ್ವರಜಗತ್ತಿನಿಂದ ಹೊರಟುಹೋಯಿತು!

ಅಶಮಾನಳು ಕಾತರಸ್ವರದಿಂದ:-ಅಪ್ಪಾ! ಅಪ್ಪಾ!! ಎಂದು ನೆಲಕ್ಕೆ ಬಿದ್ದಳು. ಮುಂದೆ ಕೆಲವು ಹೊತ್ತಿನ ಮೇಲೆ ಅವಳು ಕಣ್ಣು ತೆರೆದು ನೋಡಿದಳು. ಎದುರಿಗೆ ಕಾಶೀಮಖಾನನು. ಅವಳು ಆಪಾದಮಸ್ತಕ ನಿರೀ ಕ್ಷಣೆ ಮಾಡಿ:—"ಖಾನಸಾಹೇಬ, ಪಿತನು ಮೃತನಾದನು."

ಕಾಸೀಮ:— ಅಪ್ಪಣೆಯಾದಲ್ಲಿ ಶಹಾಜಾದನ ಮೃತಸಂಸ್ಕಾರದ ವ್ಯವಸ್ಥೆಯನ್ನು ಮಾಡಿಸುತ್ತೇನೆ.

ಅಶ:—ನಾವು ಗೌಡಕ್ಕೆ ಹೋಗಲು ಇಚ್ಛಿಸುತ್ತೇವೆ.

ಕಾಸೀಮ:—ಗೌಡರಾಜಧಾನಿಗೆ?

ಅಶ:—ಹೂಂ.

ಕಾಸೀಮ:—ತಂದೆ-ಮಕ್ಕಳಿಬ್ಬರೂ?

ಅಶ:—ಹೌದು. ಗೌಡ ಅರಮನೆಯ ಹತ್ತಿರಿರುವ ಉದ್ಯಾನದಲ್ಲಿ ತಂದೆಯ ಸಮಾಧಿಯಾಗಬೇಕು.

ಗೌಡವು ಗಣೇಶನಾರಾಯಣನ ಸ್ವಾಧೀನವಾದ್ದರಿಂದ ಕಾಸೀಮನು ಕ್ಷಣಕಾಲ ವಿಚಾರಿಸಿ:—ಒಳ್ಳೇದು, ನಿಮ್ಮ ಇಚ್ಛೆಯ ಪ್ರಕಾರ ಮಾಡುವೆನು. ಚಿಂತಿಸಬೇಡಿರಿ, ಎಂದನು.

ಅಶಮಾನಳು ಕೃತಜ್ಞತೆಯಿಂದ:—ಖಾನಸಾಹೇಬ, ನಿಮ್ಮ ಉಪಕಾರವು ಬಹಳವಾಯಿತು. ಪ್ರತಿಯಾಗಿ ಕೊಡುವ ಯೋಗ್ಯತೆಯು ನನಗಿಲ್ಲ; ಆದರೂ ಈ ಮುತ್ತಿನಸರವನ್ನು ತೆಗೆದುಕೊಳ್ಳಿರಿ. ದೇವರು ಅನುಕೂಲ ಸಮಯವನ್ನು ಕೊಟ್ಟರೆ..........ಎಂದು ಸರವನ್ನು ತೆಗೆಯಹತ್ತಿದಳು. ಕಂಠವು ಬಿಗಿದು ಮುಂದೆ ಅವಳಿಂದ ಮಾತು ಹೊರಡಲಿಲ್ಲ.

ಆಗ ಕಾಸೀಮಖಾನನು:—ಶಹಾಜಾದೀ, ಕ್ಷಮಿಸು. ಇದು ಪುರಸ್ಕಾರವನ್ನು ಕೊಡುವ ಮತ್ತು ತೆಗೆದುಕೊಳ್ಳುವ ಸಮಯವಲ್ಲ. ದೇವರು ನಿಮಗೆ ಸುದಿನವನ್ನು ಕೊಟ್ಟಾಗ ಕೊಡಿರಿ. ಇಂದು ನನ್ನ ಕರ್ತವ್ಯವನ್ನು ಮಾತ್ರ ಮಾಡಿರುವೆನು ಹೆಚ್ಚಿನದೇನೂ ಮಾಡಿಲ್ಲ. ನೀವು ಇಲ್ಲೇ ಇರಬೇಕು. ಸ್ವಲ್ಪ ಹೊತ್ತಿನಲ್ಲಿ ಗೌಡಕ್ಕೆ ಹೊರಡುವ ಸಿದ್ಧತೆ ಮಾಡಿ ಕೊಡುವೆನು, ಎಂದು ಶಹಾಜಾದಿಗೆ ಮರ್ಯಾದೆಯಿಂದ ತಲೆಬೊಗ್ಗಿಸಿ, ಹೊರಟು ಹೋದನು.

---

## ೯

ಸ್ವಲ್ಪ ಅವಧಿಯಲ್ಲಿಯೇ ರಾಜಾ ಗಣೇಶನಾರಾಯಣನು ಗೌಡನಗರಿಯನ್ನು ಸ್ವಾಧೀನಪಡಿಸಿಕೊಂಡು ಯದುನಾರಾಯಣನ ಸಂಗಡ ಸೈನ್ಯ ಕೊಟ್ಟು ತಾನಾನೂರ ಯುದ್ಧಭೂಮಿಗೆ ಅಜಿಮನ ಸಹಾಯಕ್ಕೆಂದು ಕಳುಹಿಸಿದನು.

ರಣಶೂರ ಕಾಸೀಮನ ಸೈನ್ಯವು ಅಪರಿಮಿತವಾದರೂ ಅಜಿಮನು ಅದನ್ನು ಬಹಳವಾಗಿ ಧ್ವಂಸಮಾಡಿದ್ದನು. ಯುದ್ಧ ಸಮಾಪ್ತಿಯಾಗಿ

ಬಹಳ ವೇಳೆಯಾಗಿರದಿದ್ದರೂ, ಕಾಸೀಮನ ಸೈನ್ಯದ ಉತ್ಸಾಹವು ಕಡಿಮೆಯಾಗಿದ್ದಿಲ್ಲ. ಯುದ್ಧದ ಮರುದಿವಸ ಕಾಸೀಮನು ಸೈನ್ಯಸಹಿತ ಹೊರಹೊರಟನು. ಸ್ವಲ್ಪ ಮುಂದೆ ಹೋಗುವಷ್ಟರಲ್ಲಿಯೇ ಯದುನಾರಾಯಣನ ಸೈನ್ಯವು ಎದುರಾಯಿತು.

ಪುನಃ ಯುದ್ಧಪ್ರಸಂಗವು ನಿಶ್ಚಿತವಿದ್ದರೂ ಇಷ್ಟು ಬೇಗನೆ ಶತ್ರುಗಳ ರಣಭೇರಿಯು ನಾದವು ಕೇಳಬಹುದೆಂದು ಖಾನನು ನಂಬಿದ್ದಿಲ್ಲ. ಗೌಡಸಿಂಹಾಸನವು ನಸೆರಿತ್‌ಶಹನಿಗೆ ದೊರೆಯುವದು ಈ ಯುದ್ಧವನ್ನು ಅವಲಂಬಿಸಿತ್ತು. ಕಾಸೀಮನು ಕೂಡಲೆ ತನ್ನ ಸೈನಿಕರಿಗೆ ಯುದ್ಧಕ್ಕೆ ಸಿದ್ಧರಾಗಲು ಆಜ್ಞೆಯನ್ನು ಮಾಡಿ ನಸೆರಿತ್‌ಶಹನ ಛಾವಣಿಗೆ ಬಂದನು. ನಸೆರಿತ್‌ಶಹನು ಅಜಿಮನ ಮರಣದ ನಂತರ ತಾನು ಬಾದಶಹನಾಗುವದಕ್ಕೆ ಇನ್ನು ಯಾವ ಆತಂಕವಿಲ್ಲೆಂದು ಭಾವಿಸಿದ್ದನು. ಅವಿಚಾರಿಯಾದ ಅವನು ರಾಜಾಗಣೇಶನಾರಾಯಣನ ಸಾಮರ್ಥ್ಯದ ಬಗ್ಗೆ ಸಹ ಅನಾದರವುಳ್ಳವನಾಗಿದ್ದನು. ಖಾನನು ಯುದ್ಧದ ಸುದ್ದಿಯನ್ನು ಹೇಳಿದ ಕೂಡಲೆ:—'ಖಾನಸಾಹೇಬ, ಯುದ್ಧದ ಹೊರ್ತು ಅನ್ಯ ಉಪಾಯವಿಲ್ಲವೇನು?' ಎಂದು ಕೇಳಿದನು.

ಇಂಥ ಹೇಡಿ ವಿಚಾರವು ನಸೆರಿತ್‌ಶಹನ ವಿಷಯದಲ್ಲಿ ಅಶಕ್ಯವಲ್ಲವೆಂದು ಭಾವಿಸಿ, ಖಾನನು ಕ್ರುದ್ಧನಾಗಿ:—'ಈಗ ನೀವು ಏನು ಮಾಡಬೇಕೆನ್ನುತ್ತೀರಿ?' ಎಂದನು.

ನಸೆರಿತ್‌ಶಹನು ತಲೆ ತುರಿಸಿಕೊಳ್ಳುತ್ತ:—'ಈ ಯುದ್ಧದಲ್ಲಿ ಏನಾಗುವದೋ ಯಾರಿಗೆ ಗೊತ್ತು? ಯುದ್ಧವಂತೂ ನನ್ನ ಮನಸ್ಸಿಗೆ ಬರುವದಿಲ್ಲ. ರಾಜಧಾನಿಯು ಅವರ ಕೈವಶವು. ಕಾರಣ ಬೇರೆ ಹಂಚಿಕೆಯಿದ್ದರೆ....'

ಖಾನ:—ಹೇಳಿರಿ, ನಿಮ್ಮ ಇಚ್ಛೆ ಏನಿರುವದು ಹೇಳಿರಿ. ಪಲಾಯನಕ್ಕಂತೂ ಮಾರ್ಗವಿಲ್ಲ! ಯುದ್ಧವು ಬಿಟ್ಟಿದ್ದಲ್ಲ!!

ನಸೆರಿತ್:—ಆತ್ಮಸಮರ್ಪಣೆ ಮಾಡಿದರೆ ನಡೆಯುಲಿಕ್ಕಿಲ್ಲವೇನು? ಇದೊಂದು ಸಾರೆ ಏನಾದರೂ ಮಾಡಿ ಪಾರಾಗೋಣ.

ಖಾನನಿಗೆ ಸಹನವಾಗಲಿಲ್ಲ. ಅವನು ತಿರಸ್ಕಾರದಿಂದ:—'ಏನು ಅಡ್ಡಿಯಿದೆ? ಆದರೆ ನೀವು ಆತ್ಮಸಮರ್ಪಣೆಯನ್ನು ಈ ಕಾಸೀಮಖಾನನಿಗೇ ಮಾಡಬೇಕಾಗುವದು. ಶಹಾಜಾದಾ, ನಿಮ್ಮಂಥ ಹೇಡಿಯು ರಾಜ

ನಾದರೆ ಮುಸಲ್ಮಾನರ ಗೌರವವು ಬೆಳದೀತೆ? ಛೀ ಛೀ! ನಸೆರಿತ್‌ಶಹಾ, ಗೌಡಬಾದಶಹನು ಆತ್ಮಸಮರ್ಪಣೆ ಮಾಡಬೇಕೇ? ಹಿಂದೂ ಜನರ ಪಾದದ ಕೆಳಗೆ ಮುಸಲ್ಮಾನ ಬಾದಶಹನು ತಲೆಬಗ್ಗಿಸಿಕೊಂಡು ನಿಲ್ಲುವದೇ? ಶಕ್ಯವಿಲ್ಲ. ಕಾಸೀಮನು ಇದನ್ನು ನೋಡಲಾರನು. ಯುದ್ಧಕ್ಕೆ ನೀವು ಹಿಪ್ಪದಿದ್ದರೆ ನಿಮ್ಮನ್ನು ಸೆರೆಯಾಳಾಗಿ ಮಾಡಿಕೊಂಡು ಯುದ್ಧಭೂಮಿಗೆ ಒಯ್ಯುವೆನು. ನೀವು ಸ್ವಜಾತಿ ದ್ರೋಹಿಗಳು.

ನಸೆರಿತ್:—ಕಾಸೀಮಖಾನ!............

ಕಾಸೀಮನು ನಡುವೆ:--ಈಗ ಎರಡನೇ ಯಾವ ಮಾತನ್ನೂ ಕೇಳುವದಿಲ್ಲ. ಸೈನ್ಯಕ್ಕೆ ಸಿದ್ಧವಾಗಲು ಅಪ್ಪಣೆಮಾಡಿ ಬಂದಿರುವೆನು. ನಾನು ಹೋಗಿ ಬರುವೆನು. ನೀವು ಒಂದು ಗಳಿಗೆಯಲ್ಲಿ ಸಿದ್ಧವಾಗಲಿಕ್ಕೆ ಬೇಕು. ಬಾದಶಹನು ಮನಸ್ಸಿನಲ್ಲಿ ಯುದ್ಧವು ಅನಿವಾರ್ಯವೆಂದು ಭಾವಿಸಿದನು. ಆದರೂ ಅವನು:—“ಕಾಸೀಮನು ಶೂರನು. ಯುದ್ಧದಲ್ಲಿ ಜಯವು ದೊರೆಯಬಹುದು. ಹಾಗಾದರೆ ಹೊತ್ತು ಸಾಧಿಸಿ ಈ ಕಾಸೀಮನ ಈ ಸೊಕ್ಕಿನ ಸೇಡು ತೀರಿಸಿಕೊಳ್ಳುವೆನು. ಅಪಜಯವಾದರೆ ರಾಜಾಗಣೇಶ ನಾರಾಯಣನಿಗೆ ಆತ್ಮಸಮರ್ಪಣಮಾಡಿ ಮುಖಸ್ತುತಿಮಾಡಿ ಯುಕ್ತಿಯಿಂದ ರಾಜ್ಯ ದೊರಕಿಸಬೇಕು, ಎಂದು ಮನಸ್ಸಿನಲ್ಲಿ ಯೋಚನೆ ಮಾಡಿಕೊಂಡನು.

+†+ †+† +†+ †+†

ಸ್ವಲ್ಪ ಹೊತ್ತಿನಲ್ಲಿ ಯುದ್ಧವು ಆರಂಭವಾಯಿತು. ಸೈನಿಕರ ಕಾಲು ಸಪ್ಪಳ, ಕುದುರೆಗಳ ಓಡಾಟ ಇವುಗಳಿಂದ ಧೂಳಿಯು ಆಕಾಶಕ್ಕೆ ಏರಿ, ಮಧ್ಯಾಹ್ನವು ಗೋಧೂಳಿಯಂತೆ ಭಾಸವಾಗಹತ್ತಿತು. ಖಾನನ ಸೈನ್ಯವು ರಣಕ್ಲಾಂತವಾಗಿದ್ದರೂ ಯದುನಾರಾಯಣನ ಸೈನ್ಯದ ಎಲ್ಲ ಆಕ್ರಮಣಗಳನ್ನು ವ್ಯರ್ಥಮಾಡಿದವು. ಕಾಸೀಮನಂತೂ ಕೆರಳಿದ ಸಿಂಹನಂತೆ ಅನೇಕ ಸೈನಿಕರನ್ನು ಕ್ಷಣಕ್ಷಣದಲ್ಲಿ ನಾಶಮಾಡಹತ್ತಿದನು ನಸೆರಿತ್‌ಶಹನು ಖಾನನ ಹಿಂದಿಂದೆ ಇದ್ದು, ಆತ್ಮರಕ್ಷಣೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದನು. ಚಪಲನಾದ ಖಾನನು ಚತುರಗತಿಯಿಂದ ಶತ್ರುಸೈನ್ಯವನ್ನು ಭೇದಿಸುತ್ತ ನಡೆದಾಗ ಅವನ ಹಿಂದೆ ಇರುವದು ಹೇಡಿಯಾದ ನಸೆರತ್‌ನಿಗೆ ಅಶಕ್ಯವಾಯಿತು.

ಯಾವ ಪಕ್ಷದ ಹಾನಿಯೇ ಆಗಲಿ, ವಿನಃಕಾರಣ ಆಗಬಾರದೆಂದು

ಯದುನಾರಾಯಣನ ಇಚ್ಛೆಯು. ಆದ್ದರಿಂದ ಅವನು ಈ ಯುದ್ಧದ ಜಯಾಪಜಯಗಳು ಅವಲಂಬಿಸಿರುವ ನಸೆರಿತ್‌ಶಹನೊಬ್ಬನನ್ನು ಕೊಂದರೆ ತೀರಿತೆಂದು ಭಾವಿಸಿ ಅವನನ್ನೇ ಶೋಧಿಸುತ್ತ ಆತ್ಮರಕ್ಷಣೆ ಮಾಡಿಕೊಳ್ಳುತ್ತ ನಡೆದಿದ್ದನು. ತನ್ನ ಸೈನಿಕರಿಗೂ ಇದೇ ಪ್ರಕಾರ ಹೇಳಿದ್ದನು.

ದೈವಯೋಗದಿಂದ ನಸೆರಿತ್‌ಶಹನು ಯದುನಾರಾಯಣನ ಎದುರಿಗೆ ಬಂದನು. ಯದುನಾರಾಯಣನನ್ನು ನೋಡಿ ನಸೆರಿತ್‌ನು ಮನಸ್ಸಿನಲ್ಲಿ:- ಅಜೀಮನ ಮರಣವು ನನ್ನ ಕೈಯಿಂದ ಆದಂತೆ ಇವನದೂ ನನ್ನ ಕೈಯಿಂದಲೇ ಆಗಬೇಕೆಂದು ದೇವರ ಸಂಕೇತವಿರಬಹುದು, ಎಂದು ಉತ್ಸಾಹದಿಂದ ಅವನ ಮೈಮೇಲೆ ಏರಿ ಹೋದನು; ಮತ್ತು ಹದನವಾದ ಬರ್ಚಿಯಿಂದ ಅವನ ಕುದುರೆಯನ್ನು ತಿವಿದನು; ಆದರೆ ಅವನ ಶಿಕ್ಷಿತವಾದ ಕುದುರೆಯು ಕೂಡಲೆ ಓರೆಗಾಯಿತು; ಯದುನಾರಾಯಣನ ಹೊಡತದಿಂದ ಮಾತ್ರ ನಸೆರಿತ್‌ನ ಕುದುರೆಯು ಮರಣ ಹೊಂದಿತು. ನಸೆರಿತ್‌ನು ನೆಲಕ್ಕೆ ಬಿದ್ದು ಸುತ್ತಲೂ ನೋಡಿದನು. ಖಾನನ ಸೈನ್ಯವು ಅವನ ಸಹಾಯಕ್ಕೆ ಸಿದ್ಧವಿತ್ತು. ಇಷ್ಟರಲ್ಲಿ ಯದುನಾರಾಯಣನೂ ಕುದುರೆಯಿಂದ ಇಳಿದು ನಿಂತಿದ್ದನು. ನಸೆರಿತ್‌ನು ಉತ್ಸಾಹದಿಂದ ಏರಿ ಹೋದನು. ಯದುನಾರಾಯಣನು ಕುದುರೆಯಿಂದ ಇಳಿದದ್ದು ತನ್ನ ಕಾಲಮೇಲೆ ತಾನೇ ಕಲ್ಲು ಹಾಕಿಕೊಂಡಂತೆ ಆಯಿತು; ಆದರೂ ಅವನು ಆತ್ಮರಕ್ಷಣೆ ಮಾಡಿಕೊಳ್ಳುತ್ತ ಎಲ್ಲರ ಸಂಗಡ ಒಬ್ಬನೇ ಕಾದುತ್ತಿದ್ದನು. ಬಾದಶಹನು ಇವನನ್ನು ರಣನೀತಿಯನ್ನು ಮೀರಿ ಕೊಲ್ಲಲು ಪ್ರಯತ್ನಿಸಹತ್ತಿದನು.

ಯದುಕುಮಾರನು ವೈರಿಗಳ ಮಧ್ಯದಲ್ಲಿ ಸಿಕ್ಕನು. ಅವರು ರಣನೀತಿಯನ್ನು ಮೀರಿ ಯುದ್ಧಮಾಡತಕ್ಕವರು. ಆಗ ಅವನು ಸಿಟ್ಟಿಗೆದ್ದು ತನ್ನ ನಿಜರೂಪಧಾರಣ ಮಾಡಿದನು. ಯಾರ ಆಟವೂ ನಡೆಯದ ಹಾಗಾಯಿತು. ಒಂದು ಕ್ಷಣದಲ್ಲಿ ನಸೆರಿತ್‌ನ ರುಂಡವು ನೆಲಕ್ಕುರುಳಿತು! ಕುಮಾರನು ಕೂಡಲೆ ತನ್ನ ಟೊಂಕದಲ್ಲಿದ್ದ ಭೇರಿಯನ್ನು ಬಾರಿಸಿ ಯುದ್ಧ ನಿಲ್ಲಿಸುವ ಸೂಚನೆ ಮಾಡಿದನು. ಕಾಸೀಮನ ಸೈನ್ಯವು ಯುದ್ಧವನ್ನು ನಿಲ್ಲಿಸಲಿಲ್ಲ.

ಖಾನನ ಎಲ್ಲ ಲಕ್ಷ್ಯವು ಈ ಕಡೆಗೇ ಇತ್ತು. ಮೊದಲು ಅವನಿಗೆ

ನಸೇತ್‌ನಿಗೆ ಸಹಾಯ ಮಾಡುವ ಪ್ರಯೋಜನವು ತೋರಲಿಲ್ಲ. ದೂರದಿಂದ ಕುಮಾರನ ಯುದ್ಧಕೌಶಲ್ಯವನ್ನು ನೋಡುತ್ತಿದ್ದನು. ಅನ್ಯಾಯಾತಿಕ್ರಮಣದಿಂದ ಕುಮಾರನು ರೊಚ್ಚಿಗೆದ್ದು ಭೈರವರೂಪವನ್ನು ತಾಳಿದ ಕೂಡಲೆ ಬಾದಶಹನಿಗೆ ಸಹಾಯ ಮಾಡಲು ಮುಂದರಿದನು. ಸಮೀಪಕ್ಕೆ ಹೋಗುವಷ್ಟರಲ್ಲಿ ಬಾದಶಹನು ಮೃತನು! ಸಂಗಡಲೆ ಭೇರಿನಿನಾದವು ಯುದ್ಧವನ್ನು ನಿಲ್ಲಿಸುವದಕ್ಕೆ! ಖಾನನಿಗೆ ಆಶ್ಚರ್ಯವಾಯಿತು. ಕ್ಷಣಕಾಲ ಸಂಧಿಸೂಚಕ ಭೇರಿಯನ್ನು ಅವನೂ ಬಾರಿಸಿ ಕುಮಾರನ ಹತ್ತರ ಬಂದನು.

ಕುಮಾರನು ಹಣೆಯ ಮೇಲಿನ ಬೆವರೊರಿಸಿಕೊಳ್ಳುತ್ತ:—"ಖಾನಸಾಹೇಬ, ಇನ್ನೇಕೆ ಯುದ್ಧವು? ಇಲ್ಲಿಗೆ ಯುದ್ಧಸಮಾಪ್ತಿಯಾಗಲಿ" ಎಂದನು.

ಖಾನನು ಮುಗುಳು ನಗೆಯಿಂದ:—ಹಿಂದುವೀರನೇ, ಹೇಡಿಯಾದ ನಸೇತ್‌ನನ್ನು ಕೊಲ್ಲುವ ಸಂಕಲ್ಪವನ್ನೇ ಮಾಡಿದ್ದಿಯೇನು?

"ಅದೇನೂ ಇಲ್ಲ. ಅಜೀಮು ಹಾಗು ನಸೇತ್‌ಶಹರಿಬ್ಬರೂ ಮರಣ ಹೊಂದಿದ ಮೇಲೆ ಇನ್ನೇಕೆ ಯುದ್ಧವು?"

"ಯುದ್ಧವು ಇಲ್ಲಿಗೇ ಸಮಾಪ್ತಿಯಾದರೆ ಅದರ ಸಂಗಡ ಮುಸಲ್ಮಾನರ ಗೌರವವೂ ಸಮಾಪ್ತಿಯೆಂದು ತಿಳಿಯಬೇಕಾದೀತ.?

ಕುಮಾರನು ನಗುತ್ತ:—ಖಾನಸಾಹೇಬ, ಈ ಯುದ್ಧವು ಹಿಂದೂ-ಮುಸಲ್ಮಾನರ ಜಾತಿ ಜಾತಿಗೆ ಅಲ್ಲವಷ್ಟೇ?

"ಸೂಕ್ಷ್ಮವಾಗಿ ವಿಚಾರಿಸಿದರೆ ಹಾಗೇ ಅನ್ನಬೇಕಾಗುತ್ತದೆ; ಮತ್ತು ಯುದ್ಧ ಸಮಾಪ್ತಿಯೆಂದರೆ ಮುಸಲ್ಮಾನರು ಹಿಂದುಗಳ ಆಜ್ಞಾಧಾರಕರಾಗಬೇಕಾಗುವದು. ಈ ವರೆಗೆ ಹಿಂದುಗಳ ಮೇಲೆ ಪ್ರಭುತ್ವವನ್ನು ನಡಿಸಿ ಈಗ ಅವರ ಸೇವಕರಾಗುವದು ಯೋಗ್ಯವೇ? ಇದನ್ನು ನೋಡುವದಕ್ಕಿಂತ ಯುದ್ಧದಲ್ಲಿ ಮರಣವೇ ಲೇಸು"

"ಖಾನಸಾಹೇಬ, ನಿಮ್ಮ ತಿಳುವಳಿಕೆಯು ತಪ್ಪಾಗಿರುವದು. ನಾವು ಮುಸಲ್ಮಾನರನ್ನು ಕನಿಷ್ಠರೆಂದು ನಡಿಸಿಕೊಳ್ಳಲಿಕ್ಕೆ ಗೌಡವನ್ನು ಗೆದ್ದಿಲ್ಲ. ಅವರನ್ನು ದೇಶದಿಂದ ಹೊರಗೆ ಹಾಕಬೇಕೆಂಬ ಇಚ್ಛೆಯೂ ನಮಗಿಲ್ಲ. ನಮ್ಮ ಉತ್ಕಟೇಚ್ಛೆಯು ಹಿಂದೂ-ಮುಸಲ್ಮಾನರ ಐಕ್ಯವು!"

"ಕುಮಾರ, ನಿಮ್ಮ ಇಚ್ಛೆಯು ಪ್ರಶಂಸನೀಯವು! ಆದರೆ ಒಂದೇ

ಸ್ಥಳದಲ್ಲಿ ಎರಡು ಭಿನ್ನ ಜಾತಿಗಳು ಪ್ರತಿಷ್ಠೆಯಿಂದ ಇರಲಾರವು. ಅದರಲ್ಲಿ ಹಿಂದೂ-ಮುಸಲ್ಮಾನರಿಗಂತೂ ತೀರ ಅಶಕ್ಯವು. ಸದ್ಯದ ಹಿಂದೂ ಮುಸಲ್ಮಾನರ ಸ್ಥಿತಿಗತಿಗಳನ್ನು ವಿಚಾರಿಸಿದರೆ, ಮುಸಲ್ಮಾನರು ಹಿಂದು ಜನರ ಸಂಗಡ ಸಮಾನಾಧಿಕಾರದಿಂದ ನಡೆಯಲು ಒಪ್ಪರು. ಅವರು ಹಿಂದೂಜನರ ಮೇಲೆ ನಿರಂಕುಶ ಪ್ರಭುತ್ವವನ್ನು ಇಚ್ಛಿಸುವರು''

ಕುಮಾರನು ನಗುತ್ತ:—ಖಾನಸಾಹೇಬ, ನಿಮ್ಮ ಧರ್ಮಾಭಿಮಾನವನ್ನು ನೋಡಿ ಆನಂದವಾಯಿತು; ಆದರೆ ನಿಮ್ಮಂಥ ಮುಂದಾಳುಗಳು ಸಹ ಹಿಂದೂಜನರನ್ನು ಈ ಪ್ರಕಾರ ಹೀನದೃಷ್ಟಿಯಿಂದ ನೋಡುವದು ದೇಶದ ದುರ್ದೈವವು! ಮನುಷ್ಯನು ಮನುಷ್ಯನನ್ನು ಯುದ್ಧದಿಂದ, ದೇಹಶಕ್ತಿಯಿಂದ ಜಯಿಸಿದರೆ ಕೃತಕೃತ್ಯನಾಗುವನೇನು? ಅದೂ ಇರಲಿ. ಯುದ್ಧವು ನಿಮ್ಮ ಇಚ್ಛಿತ ಕಾರ್ಯವಾದರೆ ನಾನು ಐಕ್ಯದ ಪಕ್ಷದಿಂದ, ನೀವು ಮುಸಲ್ಮಾನರ ಪಕ್ಷದಿಂದ ದ್ವಂದ್ವ ಯುದ್ಧವನ್ನು ಮಾಡುವಾ. ಆದರಲ್ಲಿಯ ಜಯಾಪಜಯಗಳಿಂದ ಸತ್ಪಕ್ಷವನ್ನು ನಿರ್ಣಯಿಸಿ ಉಭಯತರು ಅದರಂತೆ ವರ್ತಿಸೋಣ. ವಿನಃಕಾರಣ ನಿರಪರಾಧಿಗಳಾದ ಸೈನಿಕರ ನಾಶವೇಕೆ? ಎಂದು ಮುಂದೆ ಬಂದು ನಿಂತನು.

ಕಾಸೀಮನು ಮನಸ್ಸಿನಲ್ಲಿ:—ಸೈನ್ಯ-ಸೈನ್ಯಗಳ ಸಂಘರ್ಷಣಕ್ಕಿಂತ ಸೇನಾಧ್ಯಕ್ಷರ ಸಂಘರ್ಷಣವೇ ಯುಕ್ತವೆಂದು ಭಾವಿಸಿದನು. ಇದಲ್ಲದೆ ಕಾಸೀಮನು ವೀರನು. ಕುಮಾರನು ಅವನ ಸಮ ವಯಸ್ಕನು. ಅಂದ ಬಳಿಕ ದ್ವಂದ್ವ ಯುದ್ಧವೆಂದರೆ ಅದಾವ ಶೂರನಿಗೆ ಉತ್ಸಾಹವೆನಿಸಲಿಕ್ಕಿಲ್ಲ? ಪಾಶ್ಚಿಮಾತ್ಯರ ಮೋಸಯುದ್ಧದ ಈಗಿನ ಜನರಿಗೆ ದ್ವಂದ್ವಯುದ್ಧವೆಂದರೆ ಆಶ್ಚರ್ಯವು. ಇದು ಸಹಜವೇ. ಆದರ ಸ್ವಾದವು ನಿಜವಾದ ವೀರರಿಗಲ್ಲದೆ ಹೇಡಿಗಳಿಗೆ ಹೇಗೆ ಗೊತ್ತಾಗಬೇಕು?

ಸೂರ್ಯಾಸ್ತ ಸಮಯವು. ಅರುಣಕ್ಷೀಣರಶ್ಮಿಗಳು ಉಭಯ ವೀರರ ಶಸ್ತ್ರ-ಢಾಲುಗಳ ಮೇಲೆ ಬಿದ್ದು ಝಕ್‌ಮಕ್ ಮಿಂಚುತ್ತಿದ್ದವು. ಉಭಯಪಕ್ಷದ ಸೈನ್ಯವು ತಮ್ಮ ತಮ್ಮ ಸೇನಾಪತಿಯ ಹಿಂದೆ ನಿಂತುಕೊಂಡು ಯುದ್ಧನಿರೀಕ್ಷಣೆ ಮಾಡಹತ್ತಿತು.

ಧನ್ಯ! ಕಾಸೀಮಖಾನ, ನೀನೇ ಧನ್ಯನು! ನಿನ್ನೆ ಇಡೀ ರಾತ್ರಿ ಯುದ್ಧ ಮಾಡಿ ದಣಿದು ವಿಶ್ರಮಿಸಿಲ್ಲ ಕೂಡ. ಬೆಳಗಾದ ಕೂಡಲೆ ಮತ್ತೆ ಯುದ್ಧವು.

ಆಹಾರ ನಿದ್ದೆಗಳಿಲ್ಲ. ಸಂಜೆಯ ವರೆಗೆ ಯುದ್ಧಮಾಡಿ ನಿಲ್ಲನಿಲ್ಲುವಷ್ಟರಲ್ಲಿ ಮತ್ತೆ ಬಾಹು ಯುದ್ಧಕ್ಕೆ ಸಿದ್ಧನು. ಆದರೂ ಯದುನಾರಾಯಣನ ಆಕ್ರಮಣಗಳನ್ನೆಲ್ಲ ವ್ಯರ್ಥಮಾಡಿದನು.

ಕುಮಾರನು ಮನಸ್ಸಿನಲ್ಲಿ:—ನಾನು ಉಭಯತರ ಆತ್ಮರಕ್ಷಣೆ ಮಾಡುವ ಯೋಚನೆಯಿಂದ ಯುದ್ಧ ಮಾಡಿದರೆ ಬೆಳಗಿನವರೆಗೆ ಸಾಗುವದು. ಖಾನನಿಗೆ ಅಸ್ತ್ರಾಘಾತ ಮಾಡದ ವಿನಃ ಜಯವು ದೊರೆಯದು, ಎಂದು ನಿಶ್ಚಯಿಸಿದನು.

ಉಭಯತರೂ ಅಸ್ತ್ರಾಘಾತವನ್ನು ಆರಂಭಮಾಡಿದರು ಅವರವರ ಸೈನಿಕರು ಪ್ರತಿಪಕ್ಷದ ಸೇನಾಪತಿಯ ಮೃತ್ಯುವನ್ನು ಬಯಿಸಹತ್ತಿದರು. ಇಬ್ಬರಮೇಲೊಬ್ಬರು ಮದ್ದಾನೆಗಳಂತೆ ಏರಿಹೋಗುತ್ತಿದ್ದರು.

ಅಕಸ್ಮಾತ್ತಾಗಿ ಕುಮಾರನ ಕಠಾರಿಯು ಖಾನನ ಬಾಹುವಿಗೆ ಜೋರಿನಿಂದ ಪ್ರಹಾರ ಮಾಡಿತು. ಕಾಸೀಮನ ಕತ್ತಿಯು ನೆಲಕ್ಕೆ ಬಿದ್ದು ಅವನು ಮೂರ್ಛಿತನಾಗಿ ನೆಲಕ್ಕೆ ಬಿದ್ದನು! ಕೂಡಲೆ ಯದುನಾರಾಯಣನು ಗಂಭೀರ ಸ್ವರದಿಂದ:—“ಖಾನನ ಸೈನಿಕರೇ, ಚಂಚಲರಾಗಬೇಡಿರಿ. ನಿಮಗೆ ಅಭಯ ಕೊಟ್ಟಿರುವೆನು. ನಾವು ಮುಸಲ್ಮಾನರ ಶತ್ರುಗಳಲ್ಲ. ಮೊದಲು ಗಾಯಹೊಂದಿದ ಸೇನಾಪತಿಯನ್ನು ರಾಜಧಾನಿಗೆ ಒಯ್ದು ಯೋಗ್ಯ ಚಿಕಿತ್ಸೆ ಮಾಡಬೇಕು. ನಿಮ್ಮ ಮೇಲೆ ಯಾರೂ ಅತ್ಯಾಚಾರವನ್ನು ಮಾಡುವದಿಲ್ಲ. ಗೌಡವು ಮುಸಲ್ಮಾನರದೇ ಇರುತ್ತದೆ. ನಾವೂ ನೀವೂ ಅಣ್ಣತಮ್ಮಂದಿರಂತೆ ಇರೋಣ” ಎಂದನು.

---

## ೧೦

ಯದುನಾರಾಯಣನು ಗೌಡರಾಜಧಾನಿಗೆ ಬಂದ ಮರುದಿವಸ ರಾಜನು ಎಲ್ಲ ಅಮೀರ ಉಮರಾವರನ್ನು ಕರೆಸಿ ದೊಡ್ಡ ಸಭೆ ಮಾಡಿಸಿದನು. ನಿಯಮಿತ ವೇಳೆಗೆ ಎಲ್ಲರೂ ಬಂದರು. ಸಭೆಯ ಉದ್ದೇಶದ ಬಗ್ಗೆ ಜನರು ನಾನಾ ತರದ ತರ್ಕವಿತರ್ಕ ಮಾಡುತ್ತಿದ್ದರು. ರಾಜಾ ಗಣೇಶನಾರಾಯಣನು ಎದ್ದುನಿಂತು:—ಬಾಂಧವರೇ ಇಂದಿನ ಸಭೆಯ ಉದ್ದೇಶವೇನಂದರೆ, ನಾವು ಗೌಡವನ್ನು ಆಕ್ರಮಿಸಿದ್ದು ಸ್ವಂತ ರಾಜ್ಯವನ್ನು ಗಳಿಸಲಿಕ್ಕಂದಲ್ಲ. ನ್ಯಾಯವಾದ ಪಕ್ಷಕ್ಕೆ ಸಹಾಯ ಮಾಡ

ಬೇಕೆಂದು; ಆದರೆ ವಿಧಿವಶದಿಂದ ಅಜೀಮುಶಹ-ನಸರಿತ್‌ಶಹ ಇವರಿಬ್ಬರೂ ಮರಣಹೊಂದಿರುವರು. ಅಂದಬಳಿಕ ಯುದ್ಧದ ಕಾರಣವೇ ಅಳಿದು ಹೋಗಿದೆ. ಇನ್ನು ನೀವೆಲ್ಲರೂ ಒಟ್ಟಾಗಿ ಯೋಗ್ಯ ಬಾದಶಹನನ್ನು ಗೊತ್ತುಮಾಡುವ ವರೆಗೆ ನಾನು ಭಾವೀಬಾದಶಹನ ಪ್ರತಿನಿಧಿಯಾಗಿ ಕಾರಭಾರವನ್ನು ಸಾಗಿಸುವೆನು ನಮ್ಮ ರಾಜ್ಯದಲ್ಲಿಯಂತೆ ಇಲ್ಲಿಯೂ ಹಿಂದೂ ಮುಸಲ್ಮಾನರಿಬ್ಬರನ್ನೂ ಸಮನಾಗಿ ನಡೆಯಿಸಿಕೊಳ್ಳಲ್ಪಡುವದು. ಗತ ಯುದ್ಧದಲ್ಲಿಯ ದೂರ ದೋಷಗಳನ್ನು ಎಣಿಸುವದಿಲ್ಲ. ಎಲ್ಲರೂ ತಮ್ಮ ತಮ್ಮ ಮೊದಲಿನ ಅಧಿಕಾರಗಳನ್ನು ಹೊಂದಿಕೊಂಡಿರಬೇಕು ಹಿಂದೂ-ಮುಸಲ್ಮಾನರ ಐಕ್ಯವೇ ನಮ್ಮ ಮೂಲಮಂತ್ರವು. ನೀವೆಲ್ಲರು ಪೂರ್ಣ ಸಹಾನುಭೂತಿಯಿಂದ ಸಹಾಯ ಮಾಡುವಿರೆಂದು ನಂಬಿರುವೆನು.

ರಾಜನ ಸ್ಪಷ್ಟೋಕ್ತಿಗೆ ತಿರುಗಿ ಮಾತಾಡುವ ಧೈರ್ಯವು ಯಾರಿಗೂ ಆಗಲಿಲ್ಲ. ಇದ್ದರೂ ಸದ್ಯದ ಪರಿಸ್ಥಿತಿಯಲ್ಲಿ ಅದು 'ಉತ್ಪದ್ಯಂತೆ ವಿಲೀಯಂತೆ ದರಿದ್ರಾಣಾಂ ಮನೋರಥಃ' ಎಂಬಂತೆ ಆಯಿತು ಹಿಂದೆರಡು ದಿವಸಗಳಲ್ಲಿ ಗೌಡರಾಜಧಾನಿಯಲ್ಲಿ ಪೂರ್ಣ ಶಾಂತತೆಯುಂಟಾಗಿ ಎಲ್ಲ ಉದ್ಯೋಗಗಳೂ ಸುಯಂತ್ರಿತವಾಗಿ ಸಾಗಹತ್ತಿದವು ರಾಜನು ಮೃತಬಾದಶಹರ ಅಂತ್ಯವಿಧಿಯನ್ನು ಯಥೋಚಿತವಾಗಿ ಮಾಡಿಸಿದನು; ಮತ್ತು ತನ್ನ ರಾಜ್ಯವನ್ನು ಕೆಲವು ಕಾಲದ ವರೆಗೆ ತ್ರಿಪುರಾರಾಣಿಯ ಸಹಾಯದಿಂದ ಸಾಗಿಸುವಂತೆ ಬೀಗನಾದ ಅವನೀನಾಥನಿಗೆ ಪತ್ರಬರೆದನು. ಕುಮಾರನಿಗೂ ಯುದ್ಧದಲ್ಲಿ ಹಿಂದೆರಡು ಗಾಯಗಳಾಗಿದ್ದು, ಆವು ಗುಣಮುಖವಾಗಿ ಅವನೂ ತಂದೆಗೆ ನೆರವಾಗಹತ್ತಿದನು.

ಖಾನನ ಉಪಚಾರವು ನಾಲ್ಕು ದಿವಸ ಹಿಂದೇಸವನೆ ನಡೆದಿರುವದು. ಅರಮನೆಯ ಹಿಂದು ಕೋಣೆಯಲ್ಲಿ ಬೆಳ್ಳಿಯ ಮಂಚದ ಮೇಲೆ ಖಾನನು ಮಲಗಿದ್ದನು. ಅವನಿಗೆ ಶಸ್ತ್ರದ ಘಾಯಕ್ಕಿಂತ ಮನೋವೇದನೆಯು ಬಲವಾಗಿತ್ತು. ಬಾಹುವಿಗೆ ಶಸ್ತ್ರದ ಪೆಟ್ಟು ಹತ್ತಿ, ಅವನ ಕೈಯೊಳಗಿನ ಕತ್ತಿಯು ನೆಲಕ್ಕೆ ಬೀಳುವಾಗ "ಮುಸಲ್ಮಾನೀಧರ್ಮದ ಭಾವೀಸಂಕಟವನ್ನು ನೆನೆದು" ಮೂರ್ಛೆಯು ಬಂತು. ಖಾನನ ಶುಶ್ರೂಷಣೆಯ ಕಾರ್ಯಭಾರವನ್ನು ಅಶಮಾನಳು ವಹಿಸಿದಳು. ಪಿತೃಹೀನ ಬಾಲಿಕೆಯ ಔದಾರ್ಯಪೂರ್ಣ ಆಗ್ರಹಕ್ಕೆ ರಾಜನು ಬೇಡವೆನ್ನಲಿಲ್ಲ.

ಮುಸಲ್ಮಾನರಲ್ಲಿ ಘೋಷೆಯ ಪರಿಪಾಠವಿದ್ದರೂ ಅಜಿಮನ ವಿಚಾರವು ಅದಕ್ಕೆ ವಿಪರೀತವಿತ್ತು. ಮೇಲಾಗಿ ಮಗಳಿಗೆ ಸಂಪೂರ್ಣ ಓದು-ಬರಹ ಕಲಿಸಿದ್ದನು. ಅವಳೂ ಸ್ವತಂತ್ರ ವಿಚಾರದವಳಿದ್ದಳು

ಕಾಸೀಮನಿಗೆ ಸ್ಮೃತಿಯು ಬರುವದರೊಳಗೆ ಜ್ವರ ಹೆಚ್ಚಾದವು. ರಾಜವೈದ್ಯರು ಬಹಳ ಕಾಳಜಿಯಿಂದ ಚಿಕಿತ್ಸೆ ಮಾಡುತ್ತಿದ್ದರು. ಶಹಾ ಜಾದಿಯು ಸ್ವಹಸ್ತದಿಂದ ಗಾಯಕ್ಕೆ ಔಷಧ ಲೇಪನ ಮಾಡುತ್ತಿದ್ದಳು. ಅವಳಿಗೆ ಹಗಲು-ರಾತ್ರಿಯ ಭೇದವಿಲ್ಲ. ನಿದ್ದೆ ಇಲ್ಲ, ನೀರಡಿಕೆಯಿಲ್ಲ. ಕಾಯಾ-ವಾಚಾ ಮನಸ್ಸಿನಿಂದ ರೋಗಿಯ ಶುಶ್ರೂಷಣೆ ಮಾಡುತ್ತಿದ್ದಳು; ಮತ್ತು ರೋಗಿಯ ಮುಖ ನೋಡಿ ಕಣ್ಣೀರು ತಮ್ಮಿಂದ ತಾವೇ ಹೋಗು ತ್ತಿದ್ದವು!

ಖಾನನು ಜ್ವರದಲ್ಲಿಯೇ ಬಡಬಡಿಸಹತ್ತಿದನು. ಒಮ್ಮೆ:—'ನಸೆ ರಿತ್‌ಶಹಾ, ಎಚ್ಚರಿಕೆ! ನನ್ನೆದುರಿಗೆ ಕುಲೀನಸ್ತ್ರೀಯರ ಅಪಮಾನವೇ? ಹೋಗು ಇಲ್ಲಿಂದ' ಎನ್ನುವನು 'ಕ್ಷಣದಲ್ಲಿ ನಾಸಿರನಂಥ ಹೇಡಿಗೆ ಸಿಂಹಾ ಸನವು ದೊರೆಯುವದು ತೀರ ಅಯೋಗ್ಯವು' ಎಂದನು.

ಸಿಂಹಾಸನವು ಮಾತ್ರ ಮುಸಲ್ಮಾನರಿಗೇ ದೊರೆಯಬೇಕು. ರಾಜನು ರಣಶೂರನಿರಬೇಕು, ವಿಲಾಸ ಸುಖದ ದಾಸನಿರಬಾರದು. ಅವನ ನ್ಯಾಯವಾದ ಆಳಿಕೆಯಿಂದ ಇಡೀ ಜಗತ್ತು ಇಸ್ಲಾಮಿಧರ್ಮದ ದೀಕ್ಷೆ ಯನ್ನು ಸ್ವೀಕರಿಸಬೇಕು. ಅಂಥ ಸಾಮ್ರಾಟನು ದೊರೆತರೆ ಇಡೀ ಭರತ ಖಂಡದ ತುಂಬಾ ಮುಸಲ್ಮಾನರು ಆಗಿ 'ಅಲ್ಲಾ ಹೋ ಅಕಬರ!' ಎಂಬ ಧ್ವನಿಯೇ ಕೇಳಬೇಕು. ನೋಡಿದತ್ತ ಮಸೀದೆಯು ಕಾಣಬೇಕು. ಹೀಗೆ ಒಂದೇ ಜಾತಿ ಒಂದೇ ಸಮಾಜವಾದರೆ............"ಎಂದು ಅಳಹತ್ತಿ ದನು. ರೋಗಿಯ ಈ ಅವಸ್ಥೆಯನ್ನು ಕಂಡು, ಅಶಮಾನಳ ಕಣ್ಣೀರು ಒಂದೇ ಸಮನೆ ಹೋಗಹತ್ತಿದವು.

"ನಸೆರಿತಶಹನನ್ನು ನಂಬಿ ವಿಪತ್ತಿನಲ್ಲಿ ಬಿದ್ದದ್ದು ಯೋಗ್ಯವಾಗ ಲಿಲ್ಲ. ಬೇಗಮಳ ಮಾತಿನಿಂದ ಯುದ್ಧ ಮಾಡಿದ್ದು ಅವಿಚಾರತನವಾ ಯಿತು. ಹಿಂದೂಜನರಿಗೆ ಶರಣುಹೋಗಬೇಕೆನ್ನುವಂಥ ಹೇಡಿ ಮುಸ ಲ್ಮಾನನು ಬಾದಶಹನೇ? ಬಹು ದೂರವಾದ ತುರ್ಕದೇಶವನ್ನು ಬಿಟ್ಟು ಇಲ್ಲಿಗೆ ಬಂದದ್ದು ಹಿಂದುಗಳ ಕಾಲು ಕೆಳಗೆ ಮಣ್ಣಿನಲ್ಲಿ ಹೊರಳಾಡ

ಲಿಕ್ಕೇನು?''

''ಕುಮಾರ ಯದುನಾರಾಯಣನು ಶೂರನು, ವೀರನು; ಯದೂ, ನೀನು ಮುಸಲ್ಮಾನನಾಗಿದ್ದರೆ, ಈ ವಂಗ ಸಾಮ್ರಾಟಪದವಿಯನ್ನು........ ನಿನಗೆ............

''ಆಯಿತು; ನಸೆರಿತಶಹನು ಸತ್ತನು, ಅಲ್ಲ-ಅಲ್ಲ, ಹಿಂದುಗಳು.... ಮುಸಲ್ಮಾನರನ್ನು........ಮತ್ತೆ ವಿಕಟಹಾಸ್ಯ ಮಾಡಿ:—ಕುಮಾರ, ನಸೆರಿತನು ಮರಣಹೊಂದಿದರೆ ಏನಾಯಿತು? ಈ ಕಾಶೀಮನು ಇರುವವರೆಗೆ ಮುಸಲ್ಮಾನರ ಗೌರವವು ಕಡಿಮೆಯಾಗದು! ಆ ಹೇಡಿಯನ್ನು ಕೊಂದು ಆನಂದಪಡಬೇಡ. ಈ ಕಾಸೀಮುಸರ್ಪವು ಹೆಡೆಯನ್ನು ಎತ್ತಿಕೊಂಡು ನಿಂತಿರುವದು.''

ಆನಂದವು. ನೀನು ಹಿಂದುವಾದರೂ ನಿನ್ನ ಸಂಗಡ ಯುದ್ಧವು ಗೌರವವಾದದ್ದು. ಹಿಂದುಗಳು ಮುಸಲ್ಮಾನರ ಶತ್ರುಗಳು; ಕ್ಷಣದಲ್ಲಿ ನಿನ್ನನ್ನು............

ಇದೇನು? ನನ್ನ ಕೈ ಹೀಗೇಕೆ ಆಯಿತು? ನನ್ನ ಖಡ್ಗವು ಬಿದ್ದಿತಲ್ಲ! ಆಯಿತು, ಇನ್ನು ಮುಸಲ್ಮಾನರ ರಕ್ಷಣೆಯನ್ನು ಯಾರು........ ಎಂದು ರೋಗಿಯು ನಿಶ್ಚೇಷ್ಟನಾಗಿ ಬಿದ್ದನು. ಅಶಮಾನಳು ರೋಗಿಯ ಕಣ್ಣಿಗೆ ಮತ್ತು ಮುಖಕ್ಕೆ ಪನ್ನೀರು ಸೇಚನ ಮಾಡಿದಳು.

ಸ್ವಲ್ಪ ಹೊತ್ತಿನ ಮೇಲೆ ಖಾನನು ಕಣ್ಣುತೆರೆದು ಅಶಮಾನಳನ್ನು ದಿಟ್ಟಿಸಿ ನೋಡಹತ್ತಿದನು. ಅವಳು:—ಖಾನಸಾಹೇಬ! ಎಂದಳು.

ಖಾನ:—ಅ....ಶ....ಮಾ....ನ್ ತಾ ರಾ, ಎಂದನು.

''ಹೌದು ನಾನು ಅಜಿಮ ಪುತ್ರಿಯು. ಗುರ್ತು ಹತ್ತಿತೇನು?'' ಎಂದಳು.

''ಹತ್ತಿತು; ಆದರೆ ನಾನು ಎಲ್ಲಿ ಇರುವೆನು?''

''ಗೌಡನಗರಿಯಲ್ಲಿ.''

''ಗೌಡನಗರಿ?''

''ಹೌದು; ಗೌಡ ಅರಮನೆಯಲ್ಲಿ ಇರುವಿರಿ.''

''ಹಾಗಾದರೆ ನಾನು ಬಂದಿಯಾಗಿರುವೆನೇನು?''

''ಇಲ್ಲ, ಸ್ವತಂತ್ರರಿರುವಿರಿ.''

“ಏನು, ಶಹಾಜಾದಿ ನೀನೂ ತಿರಸ್ಕಾರದಿಂದ ಹುಡುಗಾಟಿಕೆ ಮಾಡುವಿಯೇನು?”

“ಖಾನಸಾಹೇಬ, ಇದು ಹುಡುಗಾಟಿಕೆಯ ಸಮಯವೇನು?”

ಹಾ! ತಿಳಿಯಿತು. ಅಂದು ತಾನಾಸೋರ ರಣಭೂಮಿಯಲ್ಲಿ ನಿನ್ನನ್ನು ಗೌಡಕ್ಕೆ ಕಳಿಸಲು ಮಾಡಿದ ಉಪಕಾರದ ಪ್ರತಿಫಲವಿದು; ಆದರೆ ಶಹಾಜಾದೀ, ನೀನು ವೈರಿಗಳ ಕೃಪಾಛತ್ರದ ಕೆಳಗೆ ನನಗೆ ಆಶ್ರಯವನ್ನು ಕೊಡಬಾರದಾಗಿತ್ತು. ಈ ಕಾಶೀಮನಿಗೆ ಇದಕ್ಕಿಂತ ಮರಣವೇ ಲೇಸಿತ್ತು. ಖುದಾ, ಎಂಥ ಹೊತ್ತು ತಂದೆ?

ಅಕಮಾನ:—ಖಾನಸಾಹೇಬ, ಇಷ್ಟೇಕೆ ಮನಸ್ಸಿಗೆ ತಾಪ ಮಾಡಿಕೊಳ್ಳುವಿರಿ? ರಾಜನೂ, ಅವನ ಪುತ್ರನೂ ಈ ವರೆಗೆ ನಮ್ಮ ಸಂಗಡ ಯಾವ ತರಹದ ಅಗೌರವದಿಂದ ವರ್ತಿಸಿಲ್ಲ; ಮತ್ತು ನಿಮ್ಮ ವಿಷಯದಲ್ಲಿ ಚಿಕಿತ್ಸೆ ಹಾಗೂ ಸಹಾನ ಭೂತಿಯನ್ನು ನೋಡಿದರೆ ಅವರ ಉದಾರಹೃದಯವು ವ್ಯಕ್ತವಾಗುತ್ತದೆ ಇದಲ್ಲದೆ ರಾಜನು ಸಭೆಗೂಡಿಸಿ ಎಲ್ಲ ಸರದಾರರ ಸಮಕ್ಷಮ:—“ತಾನು ಭಾವೀ ಸಾಮ್ರಾಟನ ಪ್ರತಿನಿಧಿಯೆಂದೂ, ಈ ವರೆಗೆ ಯಾರು ಯಾರು ಯಾವ ಯಾವ ಅಧಿಕಾರಗಳನ್ನು ಹೊಂದಿದ್ದರೋ ಅವು ಅವರಿಗೇ ಎಂದೂ, ಹಿಂದೂ-ಮುಸಲ್ಮಾನರನ್ನು ಸಮನಾಗಿ ನೋಡುವೆನೆಂದೂ ಹೇಳಿರುವನು ಇಷ್ಟೇ ಅಲ್ಲ, ನಿಮ್ಮ ಮುಖ್ಯ ಸೇನಾಪತಿಯ ಕೆಲಸವು ಕೂಡ ನಿಮಗೆ ಗುಣವಾದ ಕೂಡಲೆ ದೊರೆಯುವದು.

ಕಾಶೀಮನು ಆಶ್ಚರ್ಯದಿಂದ:—ರಾಜನು ನನ್ನ ಕೈಯಲ್ಲಿ ಇಂಥ ರಾಜಶಕ್ತಿಯನ್ನು ಕೊಡುವಷ್ಟು ವಿಶ್ವಾಸವುಳ್ಳವನಾಗಿರುವನೇ?

ಅಕಮಾನ:—ಕುಮಾರ ಯದುನಾರಾಯಣನ ಪ್ರೇಮವು ನಿಮ್ಮ ಮೇಲೆ ಬಹಳವಿದೆ.

ಖಾನ:—ಶಹಾಜಾದೀ, ಅವರ ಇಚ್ಛೆಯಾದರೂ ಏನಿರುವದು.

ಅಕಮಾನ:—ಹಿಂದು-ಮುಸಲ್ಮಾನರ ಐಕ್ಯವೇ ಅವರ ಮುಖ್ಯ ಉದ್ದೇಶವು.

ಕಾಶೀಮ:—ಅದು ಶಕ್ಯವಿರುವದೇನು?

ಅಕಮಾನ:—ಶಕ್ಯವೆಂದರೆ, ಈಗ್ಗೆ ಶಕ್ಯವಾಗುತ್ತ ನಡೆದಿರುವದು. ಐಕ್ಯದ ಉತ್ಸವವೇ ಆರಂಭವಾಗಿದೆ.

———

೧೧

ಕಾಸೀಮಖಾನನ ಪ್ರಕೃತಿಯು ದಿನೇದಿನ ಸುಧಾರಿಸ ಹತ್ತಿತು. ಪ್ರಕೃತಿಯು ಸುಧಾರಿಸುತ್ತ ನಡೆದಂತೆ ಸ್ವಭಾವದಲ್ಲಿ ವಿಚಿತ್ರ ಪ್ರಕಾರದ ಬದಲಾವಣೆಯು ತೋರಹತ್ತಿತು. ಅವನ ಹೃದಯದಲ್ಲಿಯ ಹಿಂದೂ ದ್ವೇಷಾಗ್ನಿಯು ಕಡಿಮೆಯಾಗುತ್ತ ಹಿಂದೂಜನರ ಬಗ್ಗೆ ಸಹಾನುಭೂತಿ ಯುಂಟಾಗಹತ್ತಿತು. ಯದುನಾರಾಯಣನ ಸದಯವರ್ತನವನ್ನು ನೋಡಿ, ರಾಜನ ಸಮತ್ವದ ಹೊಸ ಹೊಸ ಸುದ್ದಿಗಳನ್ನು ಕೇಳಿ ಹಿಂದೂ ದ್ವೇಷವು ತನ್ನಲ್ಲಿ ತಾನೇ ವಿಲೀನವಾಗಹತ್ತಿತು. ಪೂರ್ವಸಂಸ್ಕಾರ ಬಲದಿಂದ ಒಮ್ಮೊಮ್ಮೆ ಅದು ಪ್ರಕಟವಾದರೂ, ಯಾವದೋ ಹಿಂದು ದುರ್ಬಲವು ಅದನ್ನು ಮೇಲಕ್ಕೇಳಗೊಡಲಿಲ್ಲ.

ಕಾಸೀಮನು ಶೂರನು. ಯುವಕನು. ಉಚ್ಚಪದಸ್ಥ ಅಧಿಕಾರಿಯು. ಇಂಥವನಲ್ಲಿ ಶಹಾಜಾದಿಯ ಬಗ್ಗೆ ಪ್ರೇಮಾಂಕುರ ಉದಯಿಸಿದರೆ ಅದು ತಪ್ಪಾಗದು. ಅಶಮಾನಳು ದಯಾಮಯಿ ಪ್ರೇಮದ ಪುತ್ಥಳಿಯು. ಅವಳ ಸೌಂದರ್ಯವು ಅದ್ವಿತೀಯವು ಉಪಭೋಗಿಸಲು ಕೊರತೆ ಇಲ್ಲದಂಥ ಲಾವಣ್ಯವು ಕಾಸೀಮಖಾನ, ನೀನೇ ಧನ್ಯನು. ಅದೇಕೆ, ಆಗಿನ ವಂಗದಲ್ಲಿ ನಿನ್ನ ಹೊರ್ತು ಅವಳನ್ನು ಮದುವೆಯಾಗಲಿಕ್ಕೆ ಮುಸಲ್ಮಾನರಲ್ಲಿ ಯೋಗ್ಯರು ಯಾರು ಇರುವರು? ಅವನ ಗರ್ವಖಂಡನೆ ಮಾಡುವ ಯೋಗ್ಯತೆಯು ಯಾರಿಗಿರುವದು? ಅಶಮಾನಳಲ್ಲಿಯೂ ದೋಷವಿದ್ದಿಲ್ಲ. ಕಾಸೀಮನ ದೃಷ್ಟಿಯಿಂದ ದೋಷವೆಂದರೆ ಅವಳು ಹಿಂದೂದ್ವೇಷಿಯಿದ್ದಿಲ್ಲ. ಅದರಲ್ಲಿ ಆಕೆಯ ಅಪರಾಧವೇನು? ತಂದೆಯ ಶಿಕ್ಷಣವೇ ಕಾರಣವು.

ಶಹಾಜಾದಿಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವದು ಕಾಸೀಮನಿಗೆ ಅಸಾಧ್ಯವೇನು? ಇಲ್ಲ; ಆದರೆ ಅದಕ್ಕೆ ಅನುಕೂಲ ಸಮಯವು ಬೇಕಷ್ಟೆ? ಕಾಲನಿರೀಕ್ಷಣೆ ಮಾಡಬೇಕಷ್ಟೆ! ಅಧೀರನಾಗಿ ಇಂದೇ ಪ್ರಯತ್ನ ಮಾಡಿದರೆ ವಿಫಲ ಮನೋರಥನಾಗುವ ಸಂಭವವುಂಟು. ಜನರಲ್ಲಿಯೂ ಬೇರೆ ಭಾವನೆಯುಂಟಾಗಬಹುದು ಹಿಂದೂಜನರು ಸದ್ಯಕ್ಕೆ ತೋರಿಸುವ ನಿರಪೇಕ್ಷಿತ ಬುದ್ಧಿಯಿಂದ ಯಾವ ಪ್ರಾಧಾನ್ಯವಿರುವದೋ ಅದನ್ನು ದುರ್ಲಕ್ಷಿಸಿ ಉನ್ಮತ್ತತನದಿಂದ ಅಶಮಾನಳ ಪ್ರೇಮವನ್ನು ಪ್ರಾರ್ಥಿಸಿದರೆ ಅವಳೂ ಒಪ್ಪಲಿಕ್ಕಿಲ್ಲ ಹಿಂದೂಸಹಾನುಭೂತಿಯುಳ್ಳ ಅವಳ ಮನಸ್ಸು

ಕಲುಷಿತವಾಗುವ ಸಂಭವವುಂಟು. ಹೀಗೆ ಭಾವಿಸಿ ಖಾನನು ಕಲವು ದಿವಸ ಕಪಟದ ಹಿಂದೂಸಹಾನುಭೂತಿಯುಳ್ಳವನಾಗಿ ವರ್ತಿಸಹತ್ತಿದನು.

---

೧೨

ಖಾನನ ಪ್ರಕೃತಿಯು ಗುಣವಾಗಿದ್ದರೂ ತಕ್ಕಷ್ಟು ಬಲ ಬಂದಿದ್ದಿಲ್ಲ. ಪೂರ್ಣ ಸಾಮರ್ಥ್ಯವು ಬಂದಕೂಡಲೆ ಮತ್ತೆ ಸೇನಾಪತಿಯ ಕಾರ್ಯವನ್ನು ವಹಿಸತಕ್ಕವನು. ಅಕಮಾನಳಾದರೂ ಅವನ ಉಪಕಾರದ ಸ್ವಲ್ಪ ಭಾಗವನ್ನಾದರೂ ತೀರಿಸಿದಳೆಂದು ಹೇಳಬಹುದು. ಅವಳು ದಿನಕ್ಕೆ ಎರಡು ಸಾರೆ ಖಾನನ ಕೋಣೆಗೆ ಹೋಗಿ ಅವನಿಗೆ ಕುಶಲ ಪ್ರಶ್ನ ಮಾಡಿ ನಂತರ ಹಿಂದೆರಡು ಸಮಾಧಾನದ ಮಾತಾಡಿ ತಿರುಗಿ ಬರುತ್ತಿದ್ದಳು; ಮತ್ತು ಹಿವೊಮ್ಮೆ ನಿಷ್ಕಪಟವಾಗಿ ತಂದೆಯ ಗುಣವರ್ಣನೆಯನ್ನು ಮಾಡಿ ಉದಾರ ಹೃದಯದ ಖಾನನ ಸಹಾನುಭೂತಿಯನ್ನು ಆಕರ್ಷಣ ಮಾಡಿಕೊಂಡು ಕಣ್ಣೀರು ಸುರಿಸಿ ತೃಪ್ತಳಾಗುತ್ತಿದ್ದಳು. ಖಾನನಾದರೂ ಪಿತೃಹೀನಬಾಲಿಕೆಯ ಹೃದಯದ್ರಾವಕ ಸ್ಥಿತಿಯನ್ನು ನೋಡಿ ಸುಖ-ದುಃಖದ ಪಾಲುಗಾರನಂತೆ ಉಸಿರ್ಗರಿಯುತ್ತಿದ್ದನು. ಅವನ ಸಹಾನುಭೂತಿಯ ಆ ನಿಟ್ಟುಸಿರು ಅಕಮಾನಳ ಮೇಲಿನ ಅನುರಾಗವನ್ನು ಹೆಚ್ಚಿಸುತಲಿತ್ತು. ಇದರ ಗಾಳಿಯು ಕೂಡ ಪಾಪ ಅವಳಿಗಿದ್ದಿಲ್ಲ.

ಅಕಮಾನಳು ಪ್ರತಿದಿನ ರಾತ್ರಿ ಎಲ್ಲ ಕೆಲಸಗಳನ್ನು ಮುಗಿಸಿಕೊಂಡು ಖಾನನ ಕೋಣೆಗೆ ಹೋಗಿ ಕುಶಲವನ್ನು ಕೇಳಿಕೊಂಡು ಅಲ್ಲಿಂದ ಹೊರಟು ತಂದೆಯ ಸಮಾಧಿಯ ಹತ್ತರ ಹೋಗಿ ಕಸತೆಗೆದು ಪೂಜೆ ಮಾಡಿ ಸಮಾಧಿಗೆ ಹೂವಿನ ಮಾಲೆಯನ್ನು ಹಾಕುತ್ತಿದ್ದಳು. ಪಿತನ ವಿಯೋಗದಿಂದ ಉಂಟಾದ ದುಃಖವನ್ನು ಅಶ್ರುಗಳಿಂದ ಸಮಾಧಿಗೆ ಅಭಿಷೇಕ ಮಾಡಿ ತಿಳಿಸುತ್ತಿದ್ದಳು; ಮತ್ತು ಹಿವೊಮ್ಮೆ ಸಾರಂಗವನ್ನು ಬಾರಿಸುತ್ತಿದ್ದಳು. ಹೀಗೆ ರಾತ್ರಿಯ ಬಹು ಭಾಗವನ್ನು ಅಲ್ಲಿಯೇ ಕಳೆಯುತ್ತಿದ್ದಳು.

ಇಂದು ಮಾಘ ಶುದ್ಧ ಪೌರ್ಣಿಮೆಯು. ಸೂರ್ಯನ ತಾಪದಿಂದ ತಪ್ತವಾದ ಭೂಮಿಯನ್ನು ತನ್ನ ಶೀತಲವಾದ ಕಿರಣಗಳಿಂದ ತಂಪುಗೊಳಿಸಬೇಕೆಂದು ಚಂದ್ರಮನು ಇಡೀ ರಾತ್ರಿ ಆಕಾಶ ಪಟಲದಲ್ಲಿ ವಾಸಮಾಡಲು ನಿರ್ಧರಿಸಿ ಬಂದಿದ್ದನು. ಅವನ ಸ್ನಿಗ್ಧ ಕಿರಣಗಳು ಶಹಾಜಾದಾ

ಅಜೀಮನ ಗೋರಿಯ ಮೇಲೆ ಬಿದ್ದು ಅದರ ಸ್ವಾಭಾವಿಕ ಶುಭ್ರತ್ವವನ್ನು ಇಮ್ಮಡಿ ಮಾಡಿದ್ದವು ಸಮಾಧಿ ಮಂದಿರದಲ್ಲಿಯ ಸುಗಂಧಯುಕ್ತ ಧೂಮವು ಆ ನೋಟವನ್ನು ಮತ್ತಿಷ್ಟು ಮಧುರತರಗೊಳಿಸಿತ್ತು. ಸಮಾಧಿಯ ಮೇಲೆ ಇರುವ ಅದೇ ಅರಳಿದ ಗುಲಾಬೀ ಹೂವಿನ ಸರದ ಸುಗಂಧವು ನಾಲ್ಕೂ ಕಡೆಗೆ ಹಬ್ಬಿತ್ತು.

ಅಶಮಾನಳ ಸಮಾಧಿ ಪೂಜೆಯು ಮುಗಿಯಿತು; ಆದರೆ ಇಂದು ಅವಳ ಮನಸ್ಸಿಗೆ ಸಮಾಧಾನವಿಲ್ಲ. ಮನಸ್ಸು ಬಹಳೇ ಚಂಚಲವು. ಕಡೆಗೆ ಅವಳ ತಂದೆಯ ಸಮಾಧಿಯ ಮೇಲೆ ತಲೆಯನ್ನು ಇಟ್ಟು ಎಷ್ಟೋ ಹೊತ್ತು ಶೋಕ ಮಾಡಿದಳು; ಆದರೂ ಅವಳಿಗೆ ಸಮಾಧಾನವಿಲ್ಲ. ಅವಳು ಎದ್ದು ತನ್ನ ಪ್ರೀತಿಯ ಸಾರಂಗವನ್ನು ತೆಗೆದುಕೊಂಡು ಮಧುರಸ್ವರದಿಂದ ಹಾಡಲಿಕ್ಕೆ ಪ್ರಾರಂಭಿಸಿದಳು.

ಅಹಹಾ! ಎಂಥ ಮಧುರ ಗಾಯನವು! ಪ್ರತಿಯೊಂದು ಶಬ್ದವು ಮನೋವೇದನೆಯ ಮೂರ್ತಿಮಂತ ಸ್ವರೂಪವು. ಅವಳ ಗಾಯನದ ಕರುಣಕ್ರಂದನೆಯು ಸಮಾಧಿಮಂದಿರದೊಳಗಿನ ಪ್ರತಿಯೊಂದು ಪದಾರ್ಥಗಳಲ್ಲಿಯ ಅಂಗಾಂಗಗಳಲ್ಲಿ ಪ್ರವೇಶಿಸಿ ಆ ಸಮಾಧಿಭವನವನ್ನು ಶೋಕರಸದಲ್ಲಿ ಮುಳುಗಿಸಿತು. ದೀಪಜ್ವಾಲೆಯೂ, ಧೂಮ್ರವೂ ನಡುನಡುಗಿ ಶೋಕ ಮಾಡಹತ್ತಿದವು ಪುಷ್ಪಗುಚ್ಛವು ಶೋಕಭಾರದಿಂದ ಪೂರ್ಣ ಅರಳಿದವು. ಬಹಳವೇಕೆ, ಆ ಸಮಾಧಿಯು ಕೂಡ ನೀರವಗಾಂಭೀರ್ಯದಿಂದ ಶೋಕ ಮಾಡಿತು. ಸಮಾಧಿಸ್ಥನಾದ ಅಜಿಮುಶಹನು ಸಮಾಧಿಸ್ಥಿತಿಯಲ್ಲಿಯೇ ಶೋಕಮಾಡಿದನು; ಅಥವಾ ಅವನ ಜೀವನ್ಮುಕ್ತ ಆತ್ಮವು ಮಗಳ ಬಳಿಯಲ್ಲಿ ಕುಳಿತು ಅಳುತ್ತಿರುವ ಮಗಳಿಗೆ ವಿಚಾರದಾನವನ್ನು ಕೊಟ್ಟಿತು.

ಗಾಯನವು ಮುಗಿಯಿತು. ಅಶಮಾನಳು ಕಣ್ಣು ಹೊರಿಸಿಕೊಂಡು ಸಾರಂಗವನ್ನು ಅದರ ಸ್ಥಳದಲ್ಲಿಯೇ ಇಟ್ಟು, ಹೊರಗಿನ ಅಂಗಳದ ಕಡೆಗೆ ನೋಡಿದಳು. ಹೊರಗೆ ಯಾರೋ ಒಬ್ಬರು ಪುರುಷರು ಒಂದು ಪಾದವನ್ನು ಪಾವಟಿಗೆಯ ಮೇಲೆ, ಇನ್ನೊಂದು ಪಾದವನ್ನು ನೆಲದ ಮೇಲೆ ಇಟ್ಟುಕೊಂಡು ಏಕಾಗ್ರಚಿತ್ತದಿಂದ ಈ ಕಡೆಗೆ ನೋಡುತ್ತಿದ್ದರು. ಅಶಮಾನಳು ಗಾಬರಿಯಾಗಿ ಭೀತಿ-ಕಂಪಿತಸ್ವರದಿಂದ:-'ಯಾರವರು?' ಎಂದಳು.

ಆಗಂತುಕನೂ ಬೆದರಿದನು. ಸ್ಥಳವನ್ನು ಬಿಟ್ಟು ಕದಲದೆ ಅವನು

ಮನಸ್ಸಿನಲ್ಲಿ-ಉತ್ತರಕ್ಕೆ ವಿಲಂಬ ಮಾಡಿದರೆ ಸಂಕಟಕ್ಕೆ ಕಾರಣವು, ಎಂದು ಭಾವಿಸಿ:—"ಶಹಾಜಾದಿ, ಹೆದರಬೇಡ ನಾನು, ಕುಮಾರ ಯದುನಾರಾಯನು. ತಮ್ಮ ಹೃದಯದ್ರಾವಕ ಗೀತೆಯು ನನ್ನನ್ನು ಈ ಉದ್ಯಾನದ ಆ ಮೂಲೆಯಿಂದ ಎಳೆದುಕೊಂಡು ಬಂದು ಮುಗ್ಧನಂತೆ ಇಲ್ಲಿ ನಿಲ್ಲಿಸಿತು. ನಾನು ಕರ್ತವ್ಯಭ್ರಷ್ಟನಾಗಿರುವೆನು. ನನ್ನ ಅಪರಾಧದ ಕ್ಷಮೆಮಾಡಬೇಕು; ಆದರೂ ಇಷ್ಟು ಹೇಳುವೆನಲ್ಲ, ಇಂಥ ಮಧುರ ಗಾಯನವನ್ನು ಕೇಳಿ ಕರ್ತವ್ಯಭ್ರಷ್ಟನಾಗುವದೇ ಉತ್ತಮವು ಅದರಿಂದ ಹೃದಯವು ಧನ್ಯವಾಗುವದು. ಪವಿತ್ರವಾಗುವದು. ದೇವಭೋಗ್ಯ ಅಮೃತವನ್ನು ಕಳವಿನಿಂದ ಕುಡಿದರೆ ಸಹ ಅಮರನಾಗ ವನಲ್ಲವೇ? ಇಷ್ಟೆಲ್ಲ ಮಾತುಗಳನ್ನು ಕುಮಾರನು ಒಂದೇ ಉಸುರಿನಲ್ಲಿ ಹೇಳಿದನು. ಇವುಗಳಲ್ಲಿ ಒಂದೆರಡು ಶಬ್ದಗಳು ಮಾತ್ರ ಅಶಮಾನೇಗೆ ಕೇಳಿಸಿದವು ಅವಳ ಎದೆಯು ಜೋರಿನಿಂದ ಹಾರಹತ್ತಿತು ಹೃದಯದಲ್ಲಿ ನೂತನಭಾವನೆಯು ಹುಟ್ಟಿತು. ನಿಸ್ಸಂಕೋಚವಾಗಿ ಆತ್ಮನಿವೇದನೆ ಮಾಡಬೇಕೆಂದರೆ ಲಜ್ಜೆಯು ಅಡ್ಡಬರಹತ್ತಿತು ಹೀಗೆ ಮುಗ್ಧಳಾಗಿ ಎಷ್ಟು ಹೊತ್ತು ಇರುವದು. ಈ ಸುಯೋಗವನ್ನು ಕಳೆಯುಕೊಳ್ಳಬಾರದೆಂದು ಆತ್ಮಸಂಯಮನ ಮಾಡಿಕೊಂಡು:—ಯುವರಾಜ, ನೀವು ಯಾವ ಅಪರಾಧವನ್ನೂ ಮಾಡಿಲ್ಲವಲ್ಲ?

ಕುಮಾರನು ವಿಸ್ಮಯದಿಂದ:--ಅದು ಹೇಗೆ? ಇಂಥ ಅಪರಾತ್ರಿಯಲ್ಲಿ ಸಮಾಧಿ ಮಂದಿರದೊಳಗೆ ಬಂದು ಪಿತೃಶೋಕ ವಿಹ್ವಲಳಾದ ಶಹಜಾದಿಯ ಶಾಂತತಾಭಂಗವು ಅಪರಾಧವಲ್ಲದೆ ಮತ್ತೇನು?

ಅಶಮಾನ:—"ಇಲ್ಲ; ಕುಮಾರ, ನಿಮ್ಮ ಅಪರಾಧವಿಲ್ಲ ನಾನು ಪ್ರತಿದಿವಸ ನಿಮ್ಮ ಮಾರ್ಗನಿರೀಕ್ಷಣೆ ಮಾಡುತ್ತಿರುವೆನು ಇಂದು ಸುಯೋಗವು ಬಂತು ಒಳಗೆ ನಿಸ್ಸಂಕೋಚವಾಗಿ ಬರಬೇಕು. ನೀವು ನಮ್ಮ ತಂದೆಯ ಪರಮ ಮಿತ್ರರು. ನಿಮ್ಮ ಆಗಮನದಿಂದ ಸಮಾಧಿಸ್ಥ ಪಿತೃವಿನ ಇಚ್ಛೆಯು ಇಂದು ಪೂರ್ಣವಾಗಲಿ" ಎಂದು ಕುಮಾರನ ಕೈ ಹಿಡಿದು ಒಳಗೆ ಕರಕೊಂಡು ಹೋದಳು ಕುಮಾರನಿಗೆ ಏನೂ ತೋಚದ ಹಾಗಾಯಿತು. ಅಶಮಾನಳು ಅವನನ್ನು ಸಮಾಧಿಯ ಹತ್ತಿರ ನಿಲ್ಲಿಸಿ:—ಅಪ್ಪಾ, ನಿನ್ನ ಶತ್ರುವಿನ ನಾಶ ಮಾಡಿದಂಥ ಐಕ್ಯ ಧರ್ಮದ ಪ್ರತಿಷ್ಠೆ ಮಾಡಲು ಬದ್ಧಕಂಕಣನಾದ ಕುಮಾರ ಯದುನಾರಾಯಣನು ಬಂದಿರುವನು.

ನಾಲ್ಕೂ ಕಡೆಗೆ ನಿಸ್ತಬ್ಧತೆಯು. ಮಧ್ಯರಾತ್ರಿಯ ಸಮಯವು. ಇಂಥ ವೇಳೆಯಲ್ಲಿ ಮೃತ ಆತ್ಮದ ಕೂಡ ಆವ್ಹಾನವು. ಕುಮಾರನ ಸರ್ವಾಂಗವು ರೋಮಾಂಚಿತವಾಯಿತು. ಅವನು ಸಮಾಧಿಯನ್ನು ಮುಟ್ಟಿ ನಮಸ್ಕಾರ ಮಾಡಿ ಅಶಮಾನಳ ಕಡೆಗೆ ದಿಟ್ಟಿಸಿ ನೋಡಿದನು. ಅಹಹಾ! ಎಂಥ ಲಾವಣ್ಯವು. ಅದೇ ಅರಳಿದ ಕಮಲದಂತಹ ಮುಖವು ಬೆಳದಿಂಗಳಿಂದ ಸುಪ್ರಸನ್ನವಾಗಿ ತೋರುವದು. ಕಪೋಲವನ್ನು ಚುಂಬಿಸುವಂತ ಮುಂಗೊದಲುಗಳಿಂದ ಒಪ್ಪುವ ವಿಶಾಲವಾದ ಕಣ್ಣುಗಳು ಇಂಥ ಕಮನೀಯ ಸೌಂದರ್ಯವನ್ನು ಅವನು ಎಂದೂ ನೋಡಿದ್ದಿಲ್ಲ ಕ್ಷಣಕಾಲ ಅವನು ವಿಸ್ಮಿತನಾದನು. ನಂತರ ದೃಷ್ಟಿಯನ್ನು ಕೆಳಗೆ ಮಾಡಿ ಸಾವಕಾಶವಾಗಿ:—ನೀವು ನನ್ನ ಮಾರ್ಗ ನಿರೀಕ್ಷಣೆ ಮಾಡಿದಿರಾ? ಎಂದು ಕೇಳಿದನು.

ಅಶಮಾನ:—ಹೌದು. ಕುಮಾರ, ನಿನ್ನ ಹತ್ತಿರ ನನ್ನ ಮಹತ್ವದ ಮಾತುಗಳಿವೆ.

ಕುಮಾರ:—ನಿಸ್ಸಂಕೋಚವಾಗಿ ಮಾತಾಡಿರಿ. ನಿಮ್ಮ ಯಾವ ಇಚ್ಛೆಗೂ ನಾನು ಅಡ್ಡ ಬರುವದಿಲ್ಲ.

ಅಶಮಾನಳು ನಗುತ್ತ:—ನನ್ನ ಮೊದಲನೇ ಮಾತು, ನೀವು ನನಗೆ ಇನ್ನು ಮುಂದೆ ತಾವು—ನೀವು ಎಂದು ಮರ್ಯಾದೆ ಕೊಟ್ಟು ಮಾತಾಡಬಾರದು

ಕುಮಾರನು ಆಶ್ಚರ್ಯದಿಂದ: - "ಅದೇಕೆ?"

ಅಶಮಾನಳು:—ನೀವು ಇಷ್ಟು ಮಾತ್ರ ವಿಶ್ವಾಸವಿಡಿರಿ. "ಈ ಪವಿತ್ರ ಸ್ಥಳದಲ್ಲಿ ನನ್ನ ನಿಮ್ಮ ಮಾತುಗಳಲ್ಲಿ ದುರುದ್ದೇಶದ ಲೇಶವು ಕೂಡ ಇರಬಾರದು ಪಾಪದ ನಿಶ್ವಾಸದಿಂದ ಕೂಡ ಈ ಪವಿತ್ರ ಸ್ಥಳವು ಕಲುಷಿತವಾಗಬಾರದು." ತಿಳಿಯಿತೇ?

"ತಿಳಿಯಿತು."

"ಹಾಗಾದರೆ ಕೇಳಿರಿ ನೀವು ನನ್ನ ತಂದೆಯಿಂದ ಗೊತ್ತು ಮಾಡಲ್ಪಟ್ಟ ಪತಿಗಳು ನಾನು ನಿಮ್ಮ ದಾಸಿಯು.

ಯುವಕುಮಾರನು ಎರಡು ಹೆಜ್ಜೆ ಹಿಂದಕ್ಕೆ ಸರಿದು:—ಅದು ಹೇಗಾದೀತು? ಹೀಗಾಗುವ ಸಂಭವವಾದರೂ ಉಂಟೇ?

ಅಶಮಾನಳು ದೃಢಸ್ವರದಿಂದ:—ಯುವರಾಜ, ನನ್ನ ತಂದೆಯು ಯುದ್ಧಭೂಮಿಯಲ್ಲಿ ಪ್ರಾಣ ಬಿಡುವಾಗ ಹೇಳಿದ್ದೇನೆಂಬರೆ, "ನನ್ನನ್ನು

ಕೊಂದ ನಸೆ ತ'ಕಸನನ್ನು ಯಾರು ಕೊಲ್ಲುವರೋ, ಅವನೇ ನನ್ನ ಅಳಿಯನು; ಮತ್ತು ಅವನಿಂದ ಹಿಂದೂ-ಮುಸಲ್ಮಾನರಲ್ಲಿ ಐಕ್ಯಸ್ಥಾಪನೆಯಾಗುವದು, ಎಂದು ಹೇಳಿರುವನು ಅಂದಬಳಿಕ ಪಿತೃವಿನ ನಿರ್ದೇಶಾನುಸಾರವಾಗಿ ನೀವೇ ನನ್ನ ಪತಿಗಳು.

ಕುಮಾರನು ವಿಷಣ್ಣಭಾವದಿಂದ:-ಶಹಾಜಾದೀ, ಇದೇನು ವಿಚಿತ್ರ ತೊಡಕು ತಂದಿ? ನಾನು ಹಿಂದುಜಾತಿಯಲ್ಲಿ ಶ್ರೇಷ್ಠವರ್ಣವಾದ ಬ್ರಾಹ್ಮಣ ಜಾತಿಯುವನು ಮೇಲಾಗಿ ನನ್ನ ಲಗ್ನವಾಗಿದೆ ಇದರ ವಿಚಾರವನ್ನಾದರೂ ಮಾಡು.

ಅಕಮಾನಳು ದೃಢಸ್ವರದಿಂದ:—ನೀವು ಹಿಂದುಗಳು, ನಿಮ್ಮ ಲಗ್ನವಾಗಿದೆಯೆಂಬದು ನನಗೆ ಗೊತ್ತಿರುವದು; ಆದರೆ ಪಿತನು ಹೇಳಿದ್ದೇನಂದರೆ "ತಾನು ಹೇಳುವದು ಬಾಯಿ ಮಾತಲ್ಲ, ಆಕಾಶವಾಣಿ" ಎಂದು ಹೇಳಿರುವನು. ಕಾರಣ ಈ ದೀನದಾಸಿಯನ್ನು ಉಪೇಕ್ಷಿಸಬೇಡಿರಿ, ಎಂದು ಕಾತರದೃಷ್ಟಿಯಿಂದ ಅವನ ಕಡೆಗೆ ನೋಡಹತ್ತಿದಳು

ಕುಮಾರನು ಕ್ಷಣಕಾಲ ತಡೆದು, ನಂತರ:—ಶಹಾಜಾದಿ, ಕ್ಷಮಿಸು. ಇಂದು ನಿನ್ನ ಯಾವ ಮಾತುಗಳಿಗೂ ಉತ್ತರ ಕೊಡೆನು. ನನಗೆ ವಿಚಾರಕ್ಕೆ ಆಸ್ಪದ ಕೊಡು, ಎಂದನು.

ಅಕಮಾನಳು ನಿಶ್ಚಯ ಸ್ವರದಿಂದ:—ನಾನು ನಿಮ್ಮ ಯಾವ ಉತ್ತರವನ್ನೂ ಅಪೇಕ್ಷಿಸುವದಿಲ್ಲ ಇಂದು ನನ್ನ ತಂದೆಯ ಸಮಾಧಿ ಸನ್ನಿಧಿಯಲ್ಲಿ ಅವನ ಆಜ್ಞೆಯ ಮೇರೆಗೆ ನಿಮ್ಮನ್ನು ಪತಿಯಾಗಿ ತಿಳಿದು ಈ ಮುತ್ತಿನಸರವನ್ನು ನಿಮ್ಮ ಕೊರಳಲ್ಲಿ ಹಾಕುತ್ತೇನೆ ನೀವು ಇಚ್ಛೆಗೆ ಬಂದಂತೆ ಮಾಡಿರಿ. ನನಗೆ ನಿಮ್ಮ ಹೊರ್ತು ಜಗತ್ತಿನೊಳಗಿನ ಎಲ್ಲ ಪುರುಷರೂ ಸಹೋದರ-ಪಿತೃಸಮಾನರೆಂದು ಸಾರಿ ಹೇಳುತ್ತೇನೆ. ನಿಮ್ಮ ದಾಸಿಯು ದಾಸಿಯಾಗಿ ಕಾಲಕಳೆಯುತ್ತೇನೆ. ಜಗತ್ತಿನಲ್ಲಿಯ ಕ್ಷಣಭಂಗುರವಾದ ಯಾವ ವಿಲಾಸಸುಖಗಳ ಅಪೇಕ್ಷೆಯೂ ನನಗಿಲ್ಲ. ಎಂದು ಮುತ್ತಿನ ಸರವನ್ನು ತೆಗೆದು ಅವನ ಕೊರಳಲ್ಲಿ ಹಾಕಿದಳು. ಇದೇ ಸರವು ಹಿಂದಕ್ಕೊಮ್ಮೆ ಕಾಶೀಮಖಾನನ ಕೊರಳಲ್ಲಿ ಶೋಭಿಸುವ ಪ್ರಸಂಗ ಬಂದಿತ್ತು; ಆದರೆ ಆವಾಗ ಪುರಸ್ಕಾರರೂಪವಾಗಿ!

ಯದುನಾರಾಯಣನು ಗಂಭೀರವಾದ ವಿಚಾರಮಗ್ನನು. ದೃಷ್ಟಿಯು

ಭೂಮಿಯ ಮೇಲೆ ಇಷ್ಟೆಲ್ಲ ಸಂಗತಿಯನ್ನು ಶಹಾಜಾದಿಯು ಒಂದು ಕ್ಷಣದಲ್ಲಿ ತೀರಿಸಿದಳು. ಅವನಿಗೆ ಪ್ರತಿಬಂಧಕ್ಕೆ ಸಹ ಆಸ್ಪದಕೊಡಲಿಲ್ಲ. ಅವಳು ಸರವನ್ನು ಹಾಕಿದ ಕೂಡಲೆ ಅವನ ಪಾದವನ್ನು ಹಿಡಿದುಕೊಂಡು ಭೂಮಿಯ ಮೇಲೆ ಕುಳಿತಳು. ಇದಕ್ಕೆ ಪ್ರಾರ್ಥನವೆನ್ನದೆ ಮತ್ತೇನೆನ್ನ ಬೇಕು?

---

## ೨ನೇ ಭಾಗ.



೧

ರಾಜಾ ಗಣೇಶನಾರಾಯಣನ ಆಳಿಕೆಯು ಗೌಡಪ್ರಜೆಗಳಿಗೆ ರಾಮ ರಾಜ್ಯದಂತೆ ಸುಖಕರವಾಗಿತ್ತು. ಅವನು ಬಾದಶಹನ ಪ್ರತಿನಿಧಿಯಾಗಿ ಆಳಿದರೂ ಬಾದಶಹನೆಂಬ ನಾಮಾಂಕಿತದ ಹೊರತು ಉಳಿದ ಅಧಿಕಾರ, ಮಾನ, ಮರ್ಯಾದೆಗಳು ಬಾದಶಹನಷ್ಟೇ ಇದ್ದವು. ಅವನ ಶಾಸನ ಪದ್ಧತಿಯೂ, ಅಂತಃಕರಣಪೂರ್ವಕ ಪ್ರಜೆಗಳ ಸಂಗಡ ನಡಕೊಳ್ಳುವ ಗುಣವೂ, ಸಮದೃಷ್ಟಿಯೂ ಮುಸಲ್ಮಾನರ ಮನಸ್ಸನ್ನು ಆಕರ್ಷಣ ಮಾಡಿ ಕೊಂಡವು. ಬಾದಶಹನನ್ನು ಆರಿಸಿಕೊಳ್ಳಬೇಕೆಂಬ ವಿಚಾರವು ಕೂಡ ಅವರಲ್ಲಿ ಬರಲಿಲ್ಲ. ನಸಿರತನಿಗೆ ಸಂತಾನವಿಲ್ಲ. ಅಜಿಮನಿಗೆ ಆಶಮಾನ ಳೊಬ್ಬಳೇ ಮಗಳು. ಮುಸಲ್ಮಾನ ಧರ್ಮದಂತೆ ಹೆಣ್ಣುಮಕ್ಕಳಿಗೆ ಪಟ್ಟಾಧಿಕಾರವಿಲ್ಲ. ಅವಳ ಹೊಟ್ಟೆಯಲ್ಲಿ ಹುಟ್ಟುವ ಮಗನೇ ಭಾವೀ ಸಾಮ್ರಾಟನು ಆಶಮಾನಳ ವಿವಾಹವು ಇನ್ನೂ ಆಗಿದ್ದಿಲ್ಲ. ಅಂದ ಬಳಿಕ ಬಾದಶಹನ ಸಿಂಹಾಸನವು ವಿರಾಜಮಾನವಾಗಲಿಕ್ಕೆ ಕಾಲಾ ವಧಿಯು ಬೇಕು.

ಗಣೇಶನಾರಾಯಣನು ಮನಸ್ಸಿನಲ್ಲಿ ಆಶಮಾನಳ ಪತಿಯನ್ನು ಗೊತ್ತು ಮಾಡಿದ್ದನು. ಅವನ ಸಂಪೂರ್ಣ ಮನಸ್ಸು ಕಾಸೀಮಖಾನನ ಮೇಲೆ ಇತ್ತು. ಅವನಿಗಿಂತ ಯೋಗ್ಯರು ಯಾರು ದೊರೆಯಬೇಕು? ರೂಪ. ಶೌರ್ಯದಲ್ಲಿ ಅದ್ವಿತೀಯನು. ಧರ್ಮಾಂಧತನವು ಮಾತ್ರ ಅವನಲ್ಲಿ ವಿಶೇಷವಾಗಿತ್ತು; ಆದರೆ ಆಶಮಾನಳು ಹಿಂದೂ-ಮುಸಲ್ಮಾನರ ವಿಷಯ ದಲ್ಲಿ ಸಮದೃಷ್ಟಿಯುಳ್ಳವಳು. ಅವಳ ಮಧುರ ಸಹವಾಸವು ಕಾಸೀಮನ

ಹೃದಯದಲ್ಲಿಯು ಈ ಗುಣವನ್ನು ಇರಗೊಡದೆಂದು ರಾಜನ ಅಭಿಪ್ರಾಯವು. ಅವನು ಕಾಶೀಮನನ್ನು ಪುತ್ರನಂತೆ ಭಾವಿಸಿ, ಪ್ರತಿಯೊಂದು ಕಾರ್ಯದಲ್ಲಿ ತನ್ನ ಪುತ್ರನಗೂಡ ಇವನ ವಿಚಾರವನ್ನು ಕೇಳಿಕೊಳ್ಳುತ್ತಿದ್ದನು.

ಕಾಶೀಮಖಾನನ ದೈವದಲ್ಲಿ ಆನಂದದಿಂದ ಬಹು ದಿವಸ ರಾಜಧಾನಿಯಲ್ಲಿ ಇರುವದು ಇದ್ದಿಲ್ಲ. ಅವನಿಗೆ ಮತ್ತೆ ಯುದ್ಧಕ್ಕೆ ಹೋಗುವ ಪ್ರಸಂಗ ಬಂತು; ಸೈಫುದ್ದೀನನ ಮರಣವಾರ್ತೆಯನ್ನೂ, ಅವನ ಇಬ್ಬರು ಮಕ್ಕಳಲ್ಲಿಯ ಅಂತಃಕಲಹದ ವಾರ್ತೆಯನ್ನೂ ಕೇಳಿ, ದಿಲ್ಲಿಯ ಬಾದಶಹನು ದೊಡ್ಡ ಸೈನ್ಯದೊಂದಿಗೆ ಗೌಡದ ಮೇಲೆ ದಂಡೆತ್ತಿ ಬಂದನು. ಈ ವಾರ್ತೆಯನ್ನು ಗಣೇಶ ನಾರಾಯಣನು ಕೇಳಿ ಆ ಸೈನ್ಯದ ಮಾರ್ಗ ಪ್ರತಿಬಂಧ ಮಾಡಲಿಕ್ಕೆ ಕಾಶೀಮಖಾನನನ್ನು ಕಳುಹಿಸಿದನು ಕಾಶೀಮನ ಪ್ರಬಲ ಸೈನ್ಯವು ದಿಲ್ಲಿಯ ಸೈನ್ಯದ ಮಾರ್ಗವನ್ನು ಬಂದು ಮಾಡಿಕೊಂಡು ಕುಳಿತಿತು. ನಡುನಡುವೆ ಸಣ್ಣ ಸಣ್ಣ ಚಕಮಕಿಗಳಾಗ ಹತ್ತಿದವು. ಕಾಶೀಮನು ಮನಸ್ಸಿನಲ್ಲಿ-- 'ದಿಲ್ಲಿಯ ರಾಜ್ಯವು ಇಲ್ಲಿಗೆ ಬಹಳ ದೂರವಿದ್ದು ಅನ್ನ ಸಾಮುಗ್ರಿಗಳನ್ನು ಬಹಳ ದಿವಸಗಳ ವರೆಗೆ ಒದಗಿಸಿಕೊಳ್ಳುವದು. ಅವರಿಗೆ ಅಸಾಧ್ಯವು. ಕಾರಣ ಯುದ್ಧಮಾಡಿ ಸೈನ್ಯದ ನಾಶಮಾಡಿಕೊಳ್ಳುವದಕ್ಕಿಂತ ಆತ್ಮರಕ್ಷಣೆ ಮಾಡಿಕೊಳ್ಳುತ್ತ ದಿವಸ ಕಳೆದರೆ ತಮ್ಮಿಂದ ತಾವೇ ಹೋಗುವರು '' ಈ ಪ್ರಕಾರ ಮಾಡಿಕೊಂಡನು.

ರಾಜಾಗಣೇಶನಾರಾಯಣನಿಗೆ ಅಜೀಮನ ಸಮಾಧಿಮಂದಿರದಲ್ಲಿ ಯದುನಾರಾಯಣ ಮತ್ತು ಅಶಮಾನಳ ನಡುವೆ ಆದ ಪ್ರಣಯ ವ್ಯವಹಾರದ ಗಂಧವು ಕೂಡ ಗೊತ್ತಿದ್ದಿಲ್ಲ; ಆದರೂ ಅವನು ಪುತ್ರನಿಗೆ:— ಯದೂ, ಬಾದಶಹನ ಪರಿವಾರದ ಸಂಗಡ ಬಹಳ ಹುಷಾರಿಯಿಂದ ವರ್ತಿಸ ಬೇಕು. ಅಜೀಮನು ಜೀವಂತ ಇದ್ದರೆ ನಮಗೆ ಚಿಂತೆ ಇದ್ದಿಲ್ಲ ನಾವು ಬಹಳ ವಿನಯದಿಂದ ಅವರ ವಿಶ್ವಾಸವನ್ನು ಪಡೆಯಬೇಕು, ಎಂದು ಉಪದೇಶ ಮಾಡಿದ್ದನು; ಮತ್ತು ಅಶಮಾನಳು ತನ್ನ ಪುತ್ರನ ಮೇಲೆ ಮಾಡುವ ಆದರ ಸ್ನೇಹಗಳು ಅವಳ ಕೃತಜ್ಞತೆಯ ನಿದರ್ಶಕವೆಂದು ಭಾವಿಸಿದ್ದನು.

ಯದುನಾರಾಯಣನಿಗೆ ಸಮಾಧಿಮಂದಿರದಲ್ಲಿ ನಡೆದ ವ್ಯವಹಾರಕ್ಕಿಂತ ಪೂರ್ವದಲ್ಲಿ ತನ್ನ ಮೇಲೆ ಅಶಮಾನಳು ಅನುರಕ್ತಳಾಗಿರುವಳೆಂಬ

ಭಾವನೆಯೇ ಇದ್ದಿಲ್ಲ ತಾನು ಹಿಂದುವು ವಿವಾಹಿತನು. ಮೇಲಾಗಿ ಒಬ್ಬ ಪುತ್ರನಿರುವನು. ಹೀಗಿದ್ದರೂ ಅಶಮಾನಳ ದೃಢನಿಶ್ಚಯವು ತನ್ನನ್ನೇ ವಿವಾಹ ಮಾಡಿಕೊಳ್ಳುವದೆಂದ ಬಳಿಕ ಇದು ವಿಚಿತ್ರವೇ ಸರಿ. ಇದು ತನ್ನ ಸತ್ವಪರೀಕ್ಷೆಯು ಕಾಲವೆಂದು ಅವನು ಭಾವಿಸಿದನು. ಅಂಥ ಶೂರ ಯದುನಾರಾಯಣನ ಹೃದಯವು ಕೂಡ ಕರ್ತವ್ಯದಿಶೆಯು ಗೊತ್ತಾಗ ದಷ್ಟು ಚಂಚಲವಾಯಿತು ಕುಮಾರನು ಕೆಲವು ದಿವಸ ಬೇಗೆಂಮಹಲಿಗೆ ಹೋಗುವದನ್ನು ಕಡಿಮೆ ಮಾಡಿದನು. ಅನಿರ್ವಾಹ ಪ್ರಸಂಗದಲ್ಲಿ ಮಾತ್ರ ಹೋಗಿ ಕಾರ್ಯತೀರಿಸಿಕೊಂಡು ತೀವ್ರವಾಗಿ ಬರುತ್ತಿದ್ದನು. ಈ ಸಮಸ್ಯೆಯನ್ನು ಅನ್ಯರ ಸಹಾಯದಿಂದ ಬಿಡಿಸುವದು ಕಠಿಣವೆಂದು ತಿಳಿದು, ತನ್ನಲ್ಲಿ ತಾನೇ ಕೊರಗಹತ್ತಿದನು; ಮತ್ತು ಅಂತಃಪುರಕ್ಕೆ ಹೋಗಿಬರುವದನ್ನು ಕಡಿಮೆ ಮಾಡಿದರೆ ವಿನಃಕಾರಣ ಜನರಿಗೆ ಸಂಶಯು ಬರುವದೆಂದು ಭಾವಿಸಿ ಮತ್ತೆ ಮೊದಲಿನಂತೆ ಹೋಗಿ ಬರಹತ್ತಿದನು. ಅಶಮಾನಳಾದರೂ ಮೊದಲಿನಂತೆ ಆದರದಿಂದ ನಡಕೊಳ್ಳಹತ್ತಿದಳು; ಆದರೆ ಮಾತಿನಲ್ಲಿಯು ಪರಸ್ಪರ ಸನ್ಮಾನಸೂಚಕ ಶಬ್ದಗಳ ಬದಲು ಸಮತ್ವದರ್ಶಕ ಶಬ್ದಗಳನ್ನು ಉಪಯೋಗಿಸಹತ್ತಿದರು. ಕುಮಾರನ ಈ ವಿಷಯದ ವಿಚಾರದಿಂದ ಮನಸ್ಸು ಬಹಳ ಚಂಚಲವಾಗಲು ತಂದೆಯು ಅಪ್ಪಣೆಯಿಂದ ಭಾದುಡಿಗೆ ಹೋಗಿ ತಾಯಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಪ್ರೇಮಮಯಿಯಾದ ಕಿಶೋರಿಯ ಪ್ರೇಮಾಲಿಂಗನ ಬದ್ಧನಾಗಿ ಮತ್ತು ಕುಮಾರ ಅನೂಪನಾರಾಯಣನ ಸಂಗಡ ವಿನೋದವಾಡಿ ಸಮಾಧಾನ ಹೊಂದಿ ತಿರುಗಿ ಬರುತ್ತಿದ್ದನು; ಮತ್ತು ಕಿಶೋರಿಯ ಸಂಗಡ ಈಗಿನ ಪ್ರೇಮವರ್ತನವು ಕಪಟಪೂರಿತವೆಂದು ಮನಸ್ಸಿನಲ್ಲಿ ಬಂದ ಕೂಡಲೆ ತನ್ನಲ್ಲಿ ತಾನೇ ಅನುತಾಪ ಪಡುತ್ತಿದ್ದನು ಅದರಿಂದ ಕಿಶೋರಿಯ ಕಡೆಗೆ ದಿಟ್ಟಿಸಿ ನೋಡಲು ಸಹ ಸಂಕೋಚಪಡುತ್ತಿದ್ದನು. ಮತ್ತೆ ಆ ಚಿಂತಾಭಾರವನ್ನು ಹೊತ್ತುಕೊಂಡೇ ಗೌಡರಾಜಧಾನಿಗೆ ತಿರುಗಿ ಬರುತ್ತಿದ್ದನು.

ಅತ್ತ ಕಾಶೀಮನ ಯುದ್ಧವು ಮುಗಿಯಿತು. ಇತ್ತ ಗಣೇಶನಾರಾಯಣನು ಮರಣಹೊಂದಿದನು ಕಾಶೀಮನ ವಿಜಯವಾರ್ತೆಯು ಬರುವದರೊಳಗೆ ರಾಜನು ಪರಂಧಾಮಕ್ಕೆ ತೆರಳಿದನು.

ಕುಮಾರನು ರಾಜಧಾನಿಗೆ ಹೋಗಿ ತಂದೆಯ ಉತ್ತರಕ್ರಿಯೆಗಳನ್ನು

ತೀರಿಸಿದನು. ವಂಗದೇಶದ ಎಲ್ಲ ಪ್ರಜೆಗಳಿಗೆ ಆಮಂತ್ರಣವು. ಹಿಂದೂ ಮುಸಲ್ಮಾನರೆಂಬ ಭೇದವಿಲ್ಲ. ಎಲ್ಲರೂ ಛಾದುಡಿಗೆ ಬಂದರು. ಸಮಸ್ತ ಜಾತಿಯ ಜನರಿಗೆ ಅನ್ನೋದಕವು ಒಂದು ತಿಂಗಳ ವರೆಗೆ ಕೊಡಲ್ಪಟ್ಟಿತು. ದೀನ ದುಃಖಿಗಳ ಆಶೀರ್ವಾದವು ಆಕಾಶದ ವರೆಗೆ ಹೋಯಿತು. ಗೌಡ ಸಾಮ್ರಾಜ್ಯದ ಪ್ರತಿಯೊಂದು ದೇವಾಲಯಗಳಲ್ಲಿ ಮಸೀದೆಗಳಲ್ಲಿ ಮಹಾರಾಜರ ಮೃತ ಆತ್ಮದ ಶಾಂತಿಯ ಬಗ್ಗೆ ಏಕನಿಷ್ಠೆಯ ಪ್ರಾರ್ಥನೆಯು ನಡೆಯಿತು. ಯಾವ ಹಿಂದೂ ಅರಸನೂ ಮುಸಲ್ಮಾನರ ಕಡೆಯಿಂದ ಇಷ್ಟು ಗೌರವವನ್ನು ಪಡೆದಿರಲಿಕ್ಕಿಲ್ಲ!

———

ಕ್ರಮವಾಗಿ ಶೋಕಪ್ರವಾಹವು ಕಡಿಮೆಯಾಯಿತು. ಕುಮಾರನು ಎಲ್ಲ ಕಾರ್ಯಗಳನ್ನು ತೀರಿಸಿಕೊಂಡು ಗೌಡನಗರಿಗೆ ಬಂದು ತಂದೆಯ ಕಾರ್ಯವನ್ನು ತಾನು ಮಾಡಹತ್ತಿದನು. ಕೆಲವು ದಿವಸಗಳಲ್ಲಿ ಕುಮಾರನು ಪರಸ್ಪರನಾಗಿ ಕೇಳಿದ್ದೇನಂದರೆ:—“ಗಣೇಶನಾರಾಯಣನಂತೆ ತಾನೂ ಪ್ರತಿನಿಧಿಯಾಗಿ ಕಾರಭಾರ ಮಾಡಿದರೆ ಮುಸಲ್ಮಾನ ಪ್ರಜೆಗಳಿಗೆ ವಿಷಾದವೆನಿಸುತ್ತದೆ. ಯಾವಾಗಲೂ ಹಿಂದೂ ಕರ್ತೃತ್ವಶಕ್ತಿಯು ಕೈಕೆಳಗೆ ಮುಸಲ್ಮಾನ ಸಾಮ್ರಾಜ್ಯಚಾಲನೆಯು ಅವರ ಗೌರವಕ್ಕೆ ಕುಂದು ತರುತ್ತದೆ. ಆದ್ದರಿಂದ ಮುಸಲ್ಮಾನ ಜಾತಿಯವರಲ್ಲಿ ಒಬ್ಬನು ಪ್ರತಿನಿಧಿಯಾಗಬೇಕೆಂದು ಅವರ ಇಚ್ಛೆಯು ಈ ಬಗ್ಗೆ ಅವರು ಈಗಿನಿಂದಲೇ ಜಾಗ್ರತರಾಗುವರು.” ಈ ಪ್ರಕಾರ ಮುಸಲ್ಮಾನ ಸಮಾಜದ ವಿಚಾರವೆಂದು ಕೇಳಿದನು.

ಕುಮಾರನು ಮನಸ್ಸಿನಲ್ಲಿ:—ಅವರ ಇಚ್ಛೆಯು ಸ್ವಾಭಾವಿಕವು. ಅವರ ಇಚ್ಛೆಯಂತೆ ಯೋಗ್ಯನಾದ ಮುಸಲ್ಮಾನನನ್ನು ಪ್ರತಿನಿಧಿಯನ್ನಾಗಿ ಮಾಡಿ ಈ ವಿರೋಧ ಭಾವನೆಯನ್ನು ಅಳಿಯಬೇಕು. ಇಲ್ಲದಿದ್ದರೆ ಈ ಮತವಿರೋಧವೆಂಬ ಅಗ್ನಿಯು ಕ್ಷಣಕ್ಷಣಕ್ಕೆ ನೂತನವಾದ ಇಂಧನ ಸಂಯೋಗವನ್ನು ಹೊಂದಿ ಪಿತನಿಂದ ಆರಂಭವಾದ ಸಾಮ್ಯ್ರವೆಂಬ ಇಮಾರತನ್ನು ಭಸ್ಮಮಾಡುವದು. ಅದರಿಂದ ಸ್ವರ್ಗೀಯ ಪಿತನ ಆತ್ಮವು ತಲ್ಲಣಗೊಳ್ಳುವದು, ಎಂದು ಭಾವಿಸಹತ್ತಿದನು.

ಆಗ ಹಿಂದೂ-ಮುಸಲ್ಮಾನರಲ್ಲಿ ಇನ್ನೂ ಸಾಮ್ಯವು ಪೂರ್ಣ ನೆಲಿಸಿದ್ದಿಲ್ಲ. ಒಬ್ಬರನ್ನೊಬ್ಬರು ತಿರಸ್ಕರಿಸುತ್ತಿದ್ದರು. ಉಚ್ಚವಂಶದ ಮುಸಲ್ಮಾನರು ಬಹಿರಂಗವಾಗಿ ಸಾಮ್ಯಕ್ಕೆ ಸಹಾನುಭೂತಿಯನ್ನು ತೋರಿಸಿದರೂ ಅವರ ಅಂತರಂಗದಲ್ಲಿಯು ಸ್ವಜಾತಿ ವಿಷಯದ ಧರ್ಮಾಂಧತನವು ಕಡಿಮೆಯಾಗಿದ್ದಿಲ್ಲ. ಕಾಶೀಮಖಾನನಂಥ ವೀರ ಮುತ್ಸದ್ದಿಯ ಮನಸ್ಸು ಸಹ ಸಮದೃಷ್ಟಿಯಿಂದ ನೋಡುವಷ್ಟು ಉದಾರವುಳ್ಳದ್ದಾಗಿದ್ದಿಲ್ಲ. ಅಂದ ಬಳಿಕ ಶಾಸನದಂಡವನ್ನು ಅವರ ಕೈಯಲ್ಲಿ ಕೊಡುವ ಬಗೆಹೇಗೆ? ಇನ್ನು ಗೌಡದ ಭಾವೀ ಸಾಮ್ರಾಟನು ಅಶಮಾನಳ ಗರ್ಭದಲ್ಲಿ. ಅವಳ ವಿವಾಹವು ಇನ್ನೂ ಆಗಿದ್ದಿಲ್ಲ. ಅವಳ ದೃಢಪ್ರತಿಜ್ಞೆಯಂತೂ ವಿಚಿತ್ರವು. ಮುಸಲ್ಮಾನ ಸಮಾಜವು ಉತಾವಳಿಯಾಗಿದೆ. ಕುಮಾರನಿಗೆ ಯಾವದೂ ತೋಚಲಿಲ್ಲ. ಕಡೆಗೆ ಅವನು ಒಂದು ದಿವಸ ಅಶಮಾನಳ ಭೆಟ್ಟಿಗೆ ಹೋದನು.

ಆಕಾಶವು ಮೇಘಾಚ್ಛಾದಿತವು. ಸಂಜೆಯು ಪೂರ್ವದಲ್ಲಿಯೇ ಘನಾಂಧಕಾರವು ವ್ಯಾಪಿಸಿತ್ತು. ನಡುನಡುವೆ ಸುಳಿಗಾಳಿಯು ಹತಾಶ ಕಾಮುಕರ ನಿಶ್ವಾಸದಂತೆ ಬೀಸುತ್ತಿತ್ತು. ಅಶಮಾನಳು ಒಂದು ಬೆಳ್ಳಿಯ ಮಣೆಯ ಮೇಲೆ ಕುಳಿತು ಯಾವದೋ ಒಂದು ಗ್ರಂಥವನ್ನು ಓದುತ್ತಿದ್ದಳು. ಕುಮಾರನು ಅವಳ ಕೋಣೆಯಲ್ಲಿ ಪ್ರವೇಶ ಮಾಡಿದನು. ಅವಳು ಓದುವದರಲ್ಲಿಯೇ ಮಗ್ನಳು. ಅಹಹಾ! ಆ ನೋಟವು ಎಂಥ ಸುಂದರವು! ಆ ರಕ್ತಿಮ ಕಪೋಲಗಳೂ, ಬೆವರಿನಿಂದ ಹಸಿಯಾದ ಲಲಾಟವೂ, ನೀಲಪದ್ಮಸಮ ನಯನಗಳೂ ಎಂಥವರನ್ನಾದರೂ ಮುಗ್ಧಗೊಳಿಸುತ್ತಿದ್ದವು. ಕುಮಾರನು ಮೈಮರೆತು ಸುಮ್ಮನೆ ನೋಡುತ್ತ ನಿಂತನು. ಸ್ವಲ್ಪ ಹೊತ್ತಿನ ನಂತರ ಅವನು:—"ಅಶಮಾನ" ಎಂದು ಒದರಿದನು.

ಅಶಮಾನಳು ಚಮಕಿತಳಾಗಿ ತಿರುಗಿ ನೋಡಿದಳು; ಮತ್ತು ಕೂಡಲೆ ಎದ್ದು ಅಸ್ತವ್ಯಸ್ತವಾದ ಸೆರಗನ್ನು ಸರಿಮಾಡಿಕೊಂಡು ಕುಮಾರನಿಗೆ ಆಸನವನ್ನು ಕೊಟ್ಟು ಅವನ ಹತ್ತರ ನಿಂತು ಗಾಳಿಯನ್ನು ಹಾಕಹತ್ತಿದಳು.

ಕುಮಾರ:—"ಅಶಮಾನ, ಇಂದು ನಾನು ಯಾಕೆ ಬಂದಿರುವೆನು, ಗೊತ್ತಿರುವದೇ?" ಅವಳು ಕುಮಾರನ ಮುಖವನ್ನು ದಿಟ್ಟಿಸಿ ನೋಡಿ:— "ಗೊತ್ತಿದೆ" ಎಂದಳು.

"ಯಾಕೆ? ಹೇಳು."

"ಕರ್ತವ್ಯಪಥವನ್ನು ನಿಶ್ಚಿತ ಮಾಡಿಕೊಳ್ಳುವದಕ್ಕೆ?"

"ಹೌದು."

"ಕರ್ತವ್ಯವು ಈ ಮೊದಲೇ ನಿಶ್ಚಿತವಾಗಿರುವದಷ್ಟೇ?"

"ನಿನ್ನದು ಆಗಿರುವದು; ಆದರೆ ನನ್ನದ ?"

"ಅದರ ಉತ್ತರ ಕೊಡುವ ಯೋಗ್ಯತೆಯು ನನ್ನದಲ್ಲ. ನೀವು ಹಿಂದೂ-ಮುಸಲ್ಮಾನ ಐಕ್ಯಸ್ಥಾಪನೆಯಂಥ ಮಹತ್ವದ ವ್ರತವನ್ನು ಕೈಕೊಂಡಿರುತ್ತೀರಿ, ನಿಮಗೆ ಹೇಳುವದೇನು? ನಿಮ್ಮ ಹೃದಯವೇ ನಿಮಗೆ ಕರ್ತವ್ಯದ ಮಾರ್ಗವನ್ನು ತೋರಿಸಬೇಕು."

"ಅಕಮಾನ್, ವಂಗದೇಶದ ಆಕಾಶವು ಘನಮೇಘಾವೃತವು. ಶೀಘ್ರದಲ್ಲಿ ಬಿರುಗಾಳಿಯು ಬೀಸುವ ಲಕ್ಷಣ ತೋರುತ್ತದೆ"

"ಅದನ್ನು ಪ್ರತಿಬಂಧಿಸಲು ನೀವು ಪೂರ್ಣ ಸಮರ್ಥರಿರುವಿರಿ."

"ಆದರೆ ಅದಕ್ಕೆ ಬಹಳ ವಿಘ್ನಗಳು ಇವೆ"

"ಏನು? ನಿಮಗೆ ವಿಘ್ನಗಳೆ? ಶಕ್ಯವಿಲ್ಲ."

"ಅಕಮಾನ, ನೀನು ನನ್ನ ವಿವಾಹದ............

ಅಕಮಾನಳು ನಡುವೆ:—"ಅದು ವಿಧಿಲಿಖಿತವು ಆಗಲೇ ಬೇಕು. ಅದು ಶುಭಕ್ಕಾಗಿ."

"ನಾನು ಹಿಂದುವೆಂಬದನ್ನು ಮರೆಯಬೇಡ ಇದಲ್ಲದೆ ನಿನ್ನ ಹೊಟ್ಟೆಯಲ್ಲಿ ಹುಟ್ಟತಕ್ಕ ಪುತ್ರನು ಭಾವೀ ಸಾಮ್ರಾಟನು."

"ಹಿಂದೂ-ಮುಸಲ್ಮಾನರ ಐಕ್ಯಕ್ಕೆ ಸಹಾಯವಾಗಿಯೇ ನಮ್ಮಿಬ್ಬರ ಮಿಲನದ ಉದ್ದೇಶವು. ಈ ಉದ್ದೇಶ ಸಾಫಲ್ಯವೆಂದರೆ ನಮ್ಮ ಗರ್ಭಜನು ಸಾಮ್ರಾಟನಾಗುವದು."

"ಆದರೆ ಇದಕ್ಕೆ ಸಮಾಜದ ಒಪ್ಪಿಗೆಯು ಬೇಡವೇನು?"

"ಸಮಾಜವು ಯಾವಾಗಲೂ ಹಿಂದೇ ಬಗೆಯಾಗಿ ಇರಲಾರದು. ದೇಶ, ಕಾಲ, ಪಾತ್ರ ಭೇದದಿಂದ ಅದರ ಪರಿವರ್ತನವಾಗಲೇ ಬೇಕು ಅಂದರೆ ಸಮಾಜವು ಚಿರಸ್ಥಾಯಿಯಾಗುವದು. ನಾವು ಅಂಥ ಸಮಾಜವನ್ನು ನಿರ್ಮಾಣ ಮಾಡೋಣ."

ಇದು ಬಾಯಿಮಾತಿನಂತೆ ಸಹಜವಾಗಿ ಆಗತಕ್ಕದ್ದಲ್ಲ. ಇದರಿಂದ ದೊಡ್ಡ ತುಫಾನವೇ ಏಳುವದು."

“ಅದಕ್ಕೆ ನಿಮ್ಮಂಥ ವೀರರು ಎದೆಗುಂದುವ ಕಾರಣವಿಲ್ಲ”

“ಅಶಮಾನ, ಇಷ್ಟು ತೊಂದರೆಯಲ್ಲಿ ಬೀಳುವದಕ್ಕಿಂತ ಇನ್ನೂ ವಿಚಾರಮಾಡುವ ವೇಳೆಯು ಮೀರಿಲ್ಲ.”

“ಇನ್ನು ಬೇರೆ ವಿಚಾರವನ್ನು ಮಾಡುವಂತಿಲ್ಲ.”

“ಬೇಡ-ಬೇಡ, ಅಶಮಾನ ಬೇಡ; ಅದರಿಂದ ಇಬ್ಬರೂ ಸಂಕಟಕ್ಕೊಳಗಾಗುವೆವು. ನನ್ನ ಆಶೆಯನ್ನು ತ್ಯಾಗಮಾಡು. ಪ್ರವಾಹದ ವಿರುದ್ಧವಾಗಿ ಹೋಗುವ ಸಾಹಸವು ಬೇಡ.”

ಅಶಮಾನಳು ಅಭಿಮಾನದಿಂದ:—ತಿಳಿಯಿತು, ಕುಮಾರ ತಿಳಿಯಿತು. ನಾನೇ ಹತಭಾಗಿನಿಯು, ಎಂದು ಅಳಹತ್ತಿದಳು. ಕಂಠವು ಬಿಗಿಯಿತು. ಮಾತುಗಳು ಹೊರಡಲಿಲ್ಲ. ಕಣ್ಣೀರು ತಾವೇ ಹೋಗಹತ್ತಿದವು.

ಕುಮಾರನು ಕ್ಷಣಕಾಲ ತಡೆದು, ನಂತರ ಗಂಭೀರಸ್ವರದಿಂದ:— ಅಶಮಾನ, ನನ್ನ ಅಪರಾಧವನ್ನು ಕ್ಷಮಿಸು; ಐಕ್ಯದ ಪ್ರತಿಷ್ಠೆಯು ವಿಧಿನಿರ್ದೇಶವು. ಅದನ್ನು ತಿಳಿಯದೆ ನಾನು ಕ್ಷುದ್ರಸ್ವಾರ್ಥಕ್ಕೊಳಗಾಗಿ ಮಾರ್ಗವನ್ನು ತಪ್ಪುತ್ತಿದ್ದೆನು. ಈ ಕಾರ್ಯಕ್ಕೆ ತ್ಯಾಗವು ಅವಶ್ಯಕವು. ಐಕ್ಯವನ್ನು ಕೃತಿಯಿಂದ ತೋರಿಸಬೇಕು. ಬಾಯಿಂದ ಹೇಳಿದರೆ ಅದಕ್ಕೆ ಮಹತ್ವವಿಲ್ಲ. ಪ್ರೇಮ, ಪ್ರೀತಿ, ದಯೆ ಮುಂತಾದವು ಹೃದಯದ ವಸ್ತುಗಳು. ಅಂದಬಳಿಕ ಮೊದಲು ಹೃದಯಗಳ ಮಿಲನವಾಗಲಿಕ್ಕೆ ಬೇಕು. ಅಶಮಾನ, ನಾನು ನಿನ್ನನ್ನು ಗ್ರಹಣ ಮಾಡುವೆನು. ನೀನು ನನ್ನ ಐಕ್ಯವ್ರತದ ಸಂಗಿನಿಯು. ಇಂದು ನಿನಗೆ ನಿನ್ನ ಮಾಲೆಯ ಪ್ರತಿಫಲವನ್ನು ಹಿಡಿ, ಎಂದು ತನ್ನ ಬೆರಳೊಳಗಿನ ರತ್ನಖಚಿತದುಂಗುರವನ್ನು ಅವಳ ಬೆರಳಲ್ಲಿ ತಾನೇ ಇಟ್ಟನು: ಮತ್ತು ಅವಳನ್ನು ಆಲಂಗಿಸಿ, ಅವಳ ಕಪೋಲವನ್ನು ಚುಂಬಿಸಿದನು.

ಹೊರಗೆ ವೇಗದಿಂದ ಮಳೆಯು ಆರಂಭವಾಯಿತು. ಗಾಳಿಯು ಭರದಿಂದ ಬೀಸಹತ್ತಿತು. ಸೃಷ್ಟಿಯ ಈ ಉದ್ದಾಮ ನರ್ತನ ಸಮಯದಲ್ಲಿ ಕುಮಾರನು ಅಲ್ಲಿಂದ ಹೊರಬಿದ್ದನು.

ಇದೇ ವೇಳೆಯಲ್ಲಿ ಬಾಗಿಲದ ಹೊರಗೆ ನಿಂತ ಹಬ್ಬ ಸ್ತ್ರೀಯಳು ಆಚೆಗೆ ಹೋದಳು. ಕುಮಾರನ ಲಕ್ಷ್ಯದಲ್ಲಿ ಅದು ಬರಲಿಲ್ಲ. ಅವಳು ಯಾರಿರಬಹುದು? ಅವಳು ನಸರಿಂತ್‌ಬೇಗಮಳ ದಾಸಿಯು.

---

೩

ಸುದ್ದಿಯು ಮೊದಲು ಸಾವಿರ ಹರದಾರಿ ದೂರ ಹೋಗಿರುತ್ತದೆಂಬಂತೆ ಯದುನಾರಾಯಣನು ಶಶಜಾದಿಯು ಮೇಲೆ ಅನುರಕ್ತನಾಗಿರುವನೆಂಬ ಜನವಾರ್ತೆಯು ಗೌಡದಲ್ಲಿ ಪೂರ್ಣ ಹಬ್ಬುವದರೊಳಗೆ ಛಾದುಡಿಯಲ್ಲಿ ಕಾಲಿಕಿಶೋರನಿಗೂ ರಾಜಾ ಅವನೀನಾಥನಿಗೂ ಹತ್ತಿತು. ಅವರ ಮನಸ್ಸಿಗೆ ಸಮಾಧಾನವೆನಿಸಲಿಲ್ಲ. ಪತಿಯು ಮರಣದಿಂದ ದುಃಖಿತೆಯಾದ ರಾಣಿಗೆ ಇದನ್ನು ತಿಳಿಸುವದು ಯೋಗ್ಯವಲ್ಲವೆಂದು ಭಾವಿಸಿ, ಇಬ್ಬರೂ ಯೋಗ್ಯಕಾಲ ಪ್ರತೀಕ್ಷೆಮಾಡುತ್ತ ಕುಳಿತರು. ಆದರೂ ಜನವಾರ್ತೆಯು ರಾಣಿಯು ಕಿವಿಯು ವರೆಗೆ ಹೋಯಿತು.

ಸ್ವಲ್ಪ ದಿವಸಗಳಲ್ಲಿ ಕುಮಾರನು ಊರಿಗೆ ಬಂದನು ಚಿಂತೆಯಿಂದ ಅವನ ಮುಖವು ಮ್ಲಾನವು. ಅಳಿಯನ ಮುಖವನ್ನು ನೋಡಿ ಅವನೀನಾಥನು ವಿರಕ್ತನಾದನು. ಕುಮಾರನು ಬಂದ ಕೂಡಲೆ ಮೊದಲು ನವದ್ವೀಪ ಮೊದಲಾದ ಸ್ಥಳಗಳಲ್ಲಿಯು ವೇದವೇದಾಂಗ ಪಾರಂಗತರಾದ ಬ್ರಾಹ್ಮಣರಿಗೆ ಆಮಂತ್ರಣ ಕಳಿಸಿದನು; ಮತ್ತು ಧರ್ಮ ಸಂಬಂಧವಾದ ಒಂದು ಮಹತ್ವದ ತೊಡಕಿನ ಪ್ರಶ್ನೆಯು ಇದ್ದು ಅದರ ಬಗ್ಗೆ ಧರ್ಮದ ವಿಚಾರ ತಿಳಿದುಕೊಳ್ಳಲಿಕ್ಕೆ ಆಮಂತ್ರಣವೆಂದು ತಿಳಿಸಿದ್ದನು. ಅವರು ಬರಹೋಗುವವೆಚ್ಚವು ಕೊಡುವದೆಂದೂ ಊಟ-ಉಡಿಗೆಗಳ ವ್ಯವಸ್ಥೆ ಇಡಲ್ಪಟ್ಟಿರುತ್ತದೆಂದು ಸಹ ತಿಳಿಸಿದನು. ಅವನೀನಾಥನಿಗೆ ಇದರ ಗೂಢವೇ ತಿಳಿಯಲಿಲ್ಲ. ಪಂಡಿತರಿಗೆ ಆಮಂತ್ರಣ ಕಳಿಸಿದ ವಿಷಯವು ತ್ರಿಪುರಾದೇವಿಗೂ ತಿಳಿಯಿತು.

ಯದುನಾರಾಯಣನು ಅಂತಃಪುರಕ್ಕೆ ಹೋದ ಕೂಡಲೆ ಮೊದಲು ತಾಯಿಗೆ ನಮಸ್ಕಾರ ಮಾಡಿದನು. ಅವಳು ಮಗನ ಮುಖವನ್ನು ದಿಟ್ಟಿಸಿ ನೋಡಿ:—ಯದೂ, ನಿನ್ನ ಮುಖವು ಎಷ್ಟು ಬಾಡಿರುವುದಲ್ಲ! ಪ್ರಕೃತಿಯು ನೆಟ್ಟಗಿಲ್ಲವೇನು? ಈ ವರ್ಷ ಗುರುನಿಪಾತವಿರುತ್ತದೆ. ವಿಘ್ನಗಳು ಬಹಳ, ಎಂದು ಬೆನ್ನಮೇಲೆ ಕೈಯಾಡಿಸಹತ್ತಿದಳು. ಅವಳ ನಯನ ದ್ವಯಗಳು ಅಶ್ರುಭರಿತವು. ಯದುನಾರಾಯಣನು ತಲೆ ಬಗ್ಗಿಸಿಕೊಂಡು:— "ಅವ್ವಾ ಪ್ರಕೃತಿಯು ಚನ್ನಾಗಿರುವದು" ಎಂದನು.

ತ್ರಿಪುರಾ:—"ಹಾಗಾದರೆ ಗೌಡದಲ್ಲಿ ಏನಾದರೂ ಗೊಂದಲವೆದ್ದಿರುವದೇನು?"

ಯದು:—"ಹೌದು"

ತ್ರಿಪುರಾ:—"ಮತ್ತೇನು ವಿಶೇಷ"

ಯದು:—ಮುಸಲ್ಮಾನ ಸಮಾಜವು ಹಿಂದೂ ಪ್ರತಿನಿಧಿಯು ರಾಜ್ಯಭಾರ ಸಾಗಿಸುವದಕ್ಕೆ ಅಸಂತುಷ್ಟರು. ಇದರಿಂದ ಅವರ ಜಾತಿ ಗೌರವಕ್ಕೆ ಕುಂದು ಬರುವದಂತೆ; ಅವರು ಮುಸಲ್ಮಾನ ಪ್ರಭುತ್ವವನ್ನು ಇಚ್ಛಿಸುವರು.

ತ್ರಿಪುರಾ:—ಅದು ಸಹಜವೇ. ಈ ತರದ ಹವ್ಯಾಸಬೇಡವೆಂದು ನಾನು ಈ ಮೊದಲೇ ತಿಳಿಸಿದ್ದಿಲ್ಲವೇ? ಶಾಂತವಾಗಲು ಬಂದಿರುವದೆಂದು ಅಗ್ನಿಯನ್ನು ಅರಿವೆಯಲ್ಲಿ ಮುಚ್ಚಿಡಬಹುದೇ? ಮೊದಲೇ ನೀವು ಈ ಸಂಗತಿಯನ್ನು ತಿಳಿದಿದ್ದರೆ ಈ ಪ್ರಸಂಗ ಬರುತ್ತಿದ್ದಿಲ್ಲ. ಹಿಂದೂಜನರ ಗೌಡವು ಹಿಂದೂ ಜನರಿಗೇ ಇರತಕ್ಕದ್ದು. ಈಗ ಅದು ನಿಮ್ಮ ಸ್ವಾಧೀನದಲ್ಲಿ ಇದ್ದು ಅದು ಕೈ ಬಿಟ್ಟು ಹೋಗದಂತೆ ಎಚ್ಚರದಿಂದ ಇರಬೇಕು ಅವರ ಕೈಯಲ್ಲಿ ಕೊಟ್ಟು ಉಪಯೋಗವಿಲ್ಲ.

ಯದು:—ಅಮ್ಮಾ, ಗೌಡಸಾಮ್ರಾಜ್ಯದ ಶಾಸನಾಧಿಕಾರವನ್ನು ಮುಸಲ್ಮಾನರ ಕೈಯಲ್ಲಿ ಕೊಡುವ ಸಮಯವು ಇನ್ನೂ ಬಂದಿಲ್ಲ. ಅವರು ಹಿಂದುಗಳನ್ನು ಇನ್ನೂ ಪ್ರೇಮದೃಷ್ಟಿಯಿಂದ ನೋಡುವದಿಲ್ಲ. ಕೊಟ್ಟರೆ ಅವರು ಮತ್ತೆ ತಮ್ಮ ನಿಜರೂಪಧಾರಣ ಮಾಡುವರು, ನಮ್ಮ ಶ್ರಮದ ಸಾರ್ಥಕವಾಗುವದಿಲ್ಲ.

ತ್ರಿಪುರಾ:—ಯದೂ, ನಿಮ್ಮ ಉದ್ದೇಶವು ಸಫಲವಾಗುವ ಸಂಭವವೇ ಇಲ್ಲ. ನಿನ್ನ ಹಡೆದವರು ಸಾಯುವ ತನಕ ಶ್ರಮಬಟ್ಟರು. ಕಾರ್ಯವೆಷ್ಟರ ಮಟ್ಟಿಗೆ ಸಫಲವಾಯಿತು? ಸಾಮ್ರಾಜ್ಯವು ನಮ್ಮದು. ಮುಸಲ್ಮಾನರು ಹಿಂದೂಭಾಯೆಯಲ್ಲಿ ಬೇಕಾದ ಹಾಗೆ ಸುಖದಿಂದ ಇರತಕ್ಕದ್ದು. ಅವರನ್ನು ಪ್ರೀತಿಸಿರಿ. ತಿಳಿಹೇಳಿರಿ. ಅವರ ಆಚಾರ-ವಿಚಾರಗಳಲ್ಲಿ ಕೈ ಹಾಕಬೇಡಿರಿ. ಇದನ್ನೆಲ್ಲ ಬಿಟ್ಟು ನೀವು ಮುಸಲ್ಮಾನ ಪ್ರಭುತ್ವವನ್ನು ಮನ್ನಿಸಿ ಭಾವೀಸಾಮ್ರಾಟನ ಪ್ರತಿನಿಧಿಯೆಂದು ಡೌಲು ಮಾಡಿದರೆ, ಅವರೇಕೆ ಸುಮ್ಮನೆ ಕುಳಿತಾರು?

ಯದು—ಅವ್ವಾ, ಉದಾರ ಅಂತಃಕರಣದಿಂದ ನಾವು ಅವರ ಸಂಗಡ ವರ್ತಿಸಿ ಮುಸಲ್ಮಾನರನ್ನು ವಶೀಭೂತ ಮಾಡಿಕೊಳ್ಳಬೇಕೆಂಬದೇ

ಇಚ್ಛೆಯು. ಐಕ್ಯವು ಅಹಿಂಸೆಯಿಂದ ಸ್ಥಾಪಿಸಲ್ಪಡಬೇಕು. ನಾವು ಸಾಮ್ರಾಜ್ಯವನ್ನು ಅಪೇಕ್ಷಿಸಿದರೆ ನಮ್ಮ ಉದಾರತನವು ಫಲನೆಯಾಗಿ ಪರಿಣಮಿಸುವದು.

ತ್ರಿಪುರಾ:—ನೀನೆಂಥ ಹುಚ್ಚನು? ಅವರಿಗೆ ಹಿಂದೂ ಗೌರವಕ್ಕೆ ತಲೆ ಬಗ್ಗಿಸುವ ಮನಸ್ಸೇ ಇಲ್ಲ. ಅವರು ಕೇವಲ ಸ್ವಧರ್ಮ-ಪ್ರಭುತ್ವವನ್ನು ಬಯಿಸುವರು. ಅಕಮಾನಳ ಲಗ್ನವಾಗಿ ಗಂಡುಮಗನು ಹುಟ್ಟುವ ತನಕ ಅವರೇಕೆ ಸುಮ್ಮನೆ ಇದ್ದಾರು?

ಯದುನಾರಾಯಣನು ಈ ವಿಷಯವನ್ನು ಮುಂದೆ ಬೆಳಿಸಬಾರದೆಂದು:—ಅವ್ವಾ, ನನಗೆ ಹಸಿವೆಯಾಗಿದೆ, ಎಂದನು.

ತ್ರಿಪುರಾ:—ಹೌದು; ಈ ಹರಟೆಯಲ್ಲಿ ನನ್ನ ಲಕ್ಷ್ಯವೇ ಇಲ್ಲ. ಮೊದಲು ಒಳಗೆ ನಡೆ. ಉಪಾಹಾರ ತೀರಿಸು, ಎಂದು ಹೇಳಿ, ಮಗನನ್ನು ಕರಕೊಂಡು ಒಳಗೆ ಹೋದಳು. ಬ್ರಾಹ್ಮಣ ಪಂಡಿತರನ್ನು ಕರೆಯಿಸಿದ ಕಾರಣವನ್ನು ಕೇಳಬೇಕೆಂದು ಮನಸ್ಸಿನಲ್ಲಿ ಮಾಡಿದ್ದು ಅವಳಿಗೆ ಮರೆತೇ ಹೋಯಿತು.

†‡†  †‡†  †‡†  †‡†

ನವಕಿಶೋರಿಯ ಶಯನ ಮಂದಿರವು ಅರ್ಥಾತ್ ಯದುಕುಮಾರನ ಶಯನ ಮಂದಿರವೆಂದು ಹೇಳಬಹುದು. ಮಂದಿರವು ವಿಶೇಷ ಆಡಂಬರ ಭೂಷಿತವಲ್ಲ. ಕಿಶೋರಿಯು ಒಂದು ಕೃಷ್ಣಾಜಿನದ ಮೇಲೆ ಕುಳಿತು ಕುಮಾರ ಅನೂಪನಿಗೆ ನೀತಿ ಶಿಕ್ಷಣವನ್ನು ಕೊಡುತ್ತಿದ್ದಳು. ಅನೂಪನು ತೊದಲ್ನುಡಿಗಳಿಂದ:—ಅವ್ವಾ, ನನಗೆ ಆ ಬುದ್ಧನ ಕಥೆ ಇನ್ನೊಮ್ಮೆ ಹೇಳು. ಅಂದನು. ಕಿಶೋರಿಯು ಸಿದ್ಧಾರ್ಥನ ಕಥೆಯನ್ನು ಸಂಕ್ಷೇಪವಾಗಿ ಹೇಳತೊಡಗಿದಳು. ಅವನ ಬಾಲ್ಯವೂ ಯೌವನ ಕಾಲದಲ್ಲಿ ಹುಟ್ಟಿದ ವೈರಾಗ್ಯವೂ ಅವನ ತಾಯಿ-ತಂದೆಗಳು ಅವನನ್ನು ಸಂಸಾರದಲ್ಲಿ ತೊಡಗಿಸುವ ಬಗ್ಗೆ ಮಾಡಿದ ಪ್ರಯತ್ನಗಳೂ ಅವನ ಹೆಂಡತಿಯಾದ ಯಶೋಧರೆಯ ಗುಣವರ್ಣನೆಯೂ ಪ್ರಭುವಿನ ಪ್ರತ್ಯಕ್ಷ ದರ್ಶನದಿಂದ ಅವನಲ್ಲಿ ಹುಟ್ಟಿದ ವೈರಾಗ್ಯವೂ ಇವನ್ನೆಲ್ಲ ಸರಿಯಾಗಿ ಹೇಳಿದಳು.

ಈ ಅವಧಿಯಲ್ಲಿ ಯದುನಾರಾಯಣನು ಆ ಕೋಣೆಯೊಳಗೆ ಬಂದು

ನಿಂತಿದ್ದನು. ಅಕಸ್ಮಾತ್ತಾಗಿ ಅನೂಪನ ದೃಷ್ಟಿಯು ತಂದೆಯ ಮೇಲೆ ಬಿದ್ದು, ಕೂಡಲೆ ಅವನು:-ಅವ್ವಾ, ಅಪ್ಪನು ಬಂದಿರುವನು, ಎಂದು ಓಡಿ ಬಂದನು.

ಕಿಶೋರಿಯು ಎದ್ದು ಮುಗುಳುನಗೆಯಿಂದ ಪತಿಗೆ ನಮಸ್ಕಾರ ಮಾಡಿದಳು. ಯದುನಾರಾಯಣನು ಪಲ್ಲಂಗದ ಮೇಲೆ ಕುಳಿತು ಅನುಪನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಕಿಶೋರಿಯು ಪತಿಯ ಚರಣಸನ್ನಿಧಿಯಲ್ಲಿ ಕುಳಿತು ಕಾಲುಗಳ ಮೇಲೆ ಕೈಯಾಡಿಸುತ್ತ ಪತಿಯ ಮುಖವನ್ನು ದಿಟ್ಟಿಸಿ ನೋಡಹತ್ತಿದಳು.

ಯದು:—ಕಿಶೋರಿ, ಏನು ನೋಡುವಿ?

ಕಿಶೋರಿ:—ನಿಮ್ಮನ್ನು ನೋಡುವೆನು.

ಯದು:—ಎಂದೂ ನೋಡಿಲ್ಲವೇನು?

ಕಿಶೋರಿ:—ಈ ಪ್ರಕಾರ ಬಾಡಿದ ಮುಖವನ್ನೆಂದೂ ನೋಡಿದ್ದಿಲ್ಲ.

ಯದು:—ನಿನ್ನನ್ನು ಒಂದು ಮಾತು ಕೇಳುವೆನು.

ಕಿಶೋರಿ:—ಅವಶ್ಯವಾಗಿ ಕೇಳಿರಿ.

ಯದು:—ಬುದ್ಧ ಪತ್ನಿಯಾದ ಯಶೋಧರೆಯಂಥ ಪ್ರಸಂಗವು ಬಂದರೆ, ನೀನು ಏನು ಮಾಡುವಿ?

ಕಿಶೋರಿ:—ಅದು ಯಾವ ಪ್ರಸಂಗವು?

ಯದು:—ಬುದ್ಧನು ಸಂಸಾರತ್ಯಾಗ ಮಾಡಿದಾಗಿನಂಥ ಪ್ರಸಂಗವು.

ಕಿಶೋರಿಯು ಪತಿಯ ಮುಖವನ್ನು ದಿಟ್ಟಿಸಿ ನೋಡುತ್ತ:—ಅದನ್ನೇಕೆ ಕೇಳುವಿರಿ?

ಯದು:—ಸಹಜವಾಗಿ ಕೇಳಿದೆನು.

ಕಿಶೋರಿಯ ಮನದಲ್ಲಿ ಸಂಶಯವು ಬರಲು, ಅಭಿಮಾನದಿಂದ ಅವಳು:-ಯಾರು ಬುದ್ಧನ ಆದರ್ಶಸ್ವರೂಪರೋ, ಅವರ ಪತ್ನಿಯು ಬುದ್ಧನ ಪತ್ನಿಯಂತೆ ವರ್ತಿಸಬೇಕಲ್ಲವೇ?

ಯದು:—ಒಂದುವೇಳೆ ಬುದ್ಧನಂಥ ಪ್ರಕಾರದಲ್ಲಿ ಸಂಸಾರ ತ್ಯಾಗವು ಆಗದಿದ್ದರೆ?

ಕಿಶೋರಿ:—ನಿಮ್ಮ ಮಾತಿನ ಗೂಢವು ನನಗೆ ತಿಳಿಯಲೊಲ್ಲದು. ಏನೇ ಆಗಲಿ, ಆ ಮಾರ್ಗವು ಉದಾರ ಮಾರ್ಗವಷ್ಟೇ?

ಯದು:—ಮಾರ್ಗವು ಉದಾರವಾಗಿದ್ದರೂ ಅದಕ್ಕೆ ಸಮಾಜ-ಧರ್ಮ ಮೊದಲಾದವು ಅಡ್ಡ ಬರುವವು.

ಕಿಶೋರಿ:—ಧರ್ಮ-ಸಮಾಜಗಳು ಅಡ್ಡ ಬರುವಂಥ ಉದಾರ ಮಾರ್ಗವೇ?

ಯದುನಾರಾಯಣನು ಗಂಭೀರ ಸ್ವರದಿಂದ:—ಕಿಶೋರಿ, ಹಾಗಾದರೆ ಕೇಳು. ಗೌಡಪ್ರಜೆಗಳಲ್ಲಿ ಅಸಂತೋಷವುಂಟಾಗಿದೆ. ತೀವ್ರದಲ್ಲಿ ಅನರ್ಥೋತ್ಪಾತಗಳು ಉಂಟಾಗುವ ಸಂಭವವಿರುವದು. ಹಿಂದೂ-ಮುಸಲ್ಮಾನರಲ್ಲಿ ಮತ್ತೆ ಜಗಳ ಹುಟ್ಟುವಂತೆ ತೋರುತ್ತದೆ. ಆ ದ್ವೇಷಮೂಲವನ್ನು ನಾಶಗೊಳಿಸಲಿಕ್ಕೆ ಮತ್ತು ಐಕ್ಯದ ಆಸನವನ್ನು ದೃಢವಾದ ಸ್ಥಳದ ಮೇಲೆ ಸ್ಥಾಪಿಸುವದಕ್ಕೆ ನಾನು ಮಹತ್ವದ ತ್ಯಾಗಮಾಡಬೇಕಾಗಿರುತ್ತದೆ. ನನ್ನ ತ್ಯಾಗವು ಬೇರೆ ಯಾವದೂ ಅಲ್ಲ; ಶಹಾಜಾದಿ ಅಕಮಾನ ತಾರಾಳ ಕೂಡ ವಿವಾಹವು—

ಬಿರುಗಾಳಿಗೆ ಸಿಕ್ಕ ಮರವು ಬೇರು ಸಹಿತ ಕಿತ್ತು ಬೀಳುವಂತೆ ಕಿಶೋರಿಯು ನೆಲಕ್ಕೆ ಬಿದ್ದಳು. ಅನೂಪನು ಗಾಬರಿಯಾಗಿ ತಾಯಿಯ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಅಳಹತ್ತಿದನು. ಕಿಶೋರಿಯು ಬಾಯಿಂದ:—ನಾಥ, ನನ್ನ ಸರ್ವಸ್ವವೂ ನೀವೇ. ಅಂದಬಳಿಕ ನನ್ನ ರಕ್ಷಣೆಯನ್ನು ನಿಮ್ಮ ಹೊರತು ಬೇರೆ ಯಾರು ಮಾಡಬೇಕು? ಸ್ತ್ರೀಯರ ಅಬಲತ್ವವು ಇಲ್ಲಿಯೇ ಅಲ್ಲವೇ?

ಪತ್ನಿಯ ಈ ದುರವಸ್ಥೆಯನ್ನು ನೋಡಲಿಕ್ಕೆ ಸಹ ಕುಮಾರನಿಗೆ ಅವಕಾಶ ಸಿಗಲಿಲ್ಲ. ರಾಣಿ ತ್ರಿಪುರಾದೇವಿಯು ಕೋಣೆಯೊಳಗೆ ಬಂದು ಕ್ರೋಧಕಂಪಿತ ಸ್ವರದಿಂದ:-ಯದೂ, ಎಂದಳು ಅವಳ ಕಡೆಗೆ ನೋಡುವ ಧೈರ್ಯವು ಅವನಿಗಾಗಲಿಲ್ಲ.

ಯದುನಾರಾಯಣನು ದೀನಸ್ವರದಿಂದ:-ಅಮ್ಮಾ, ಯಾಕೆ ಎಂದನು.

ತ್ರಿಪುರಾ:—ನಾನು ಕೇಳಿದ ಜನವಾರ್ತೆಯು ಸುಳ್ಳಲ್ಲವೆಂದ ಹಾಗಾಯಿತು. ಯದುನಾರಾಯಣ, ನಿನ್ನ ಕೊರಳಲ್ಲಿರುವದು ಯಜ್ಞೋಪವೀತವಲ್ಲವೆ? ನೀನು ಶ್ರೇಷ್ಠವಾದ ಬ್ರಾಹ್ಮಣವಂಶದಲ್ಲಿ ಹುಟ್ಟಿರುವಿಯಲ್ಲವೇ? ನೀನು ಯಾರ ಗರ್ಭದಲ್ಲಿ ಜನಿಸಿರುವಿಯೆಂಬದು ಗೊತ್ತಿರುವದೇನು? ಶಿವ! ಶಿವ!! ಇಂಥ ನೀನು ಕಡೆಗೆ ಧರ್ಮ, ಜಾತಿ, ಮನೆತನದ ಗೌರವಗಳ ಲಕ್ಷ್

ವಿಲ್ಲದೆ, ಯವನ ಕನ್ನಿಕೆಯ ಮೇಲೆ ಅನುರಕ್ತನಾಗಿರುವಿಯಾ? ದೇವರೆ, ನನ್ನನ್ನು ಬಂಜೆಯನ್ನಾಗಿ ಮಾಡಿದ್ದರೆ ನನಗೆ ಇಷ್ಟು ದುಃಖವಾಗುತ್ತಿದ್ದಿಲ್ಲ! ಈ ಅತ್ಯಾಚಾರವನ್ನು ಸಹಿಸುವದು ನನ್ನಿಂದಾಗದು!!

ಯದು:—ಅವ್ವಾ, ಅನ್ಯ ಉಪಾಯವೇ ಇಲ್ಲ.

ತ್ರಿಪುರಾ:—ನನ್ನ ಮುಂದೆ ಇನ್ನು ಒಂದು ಅಕ್ಷರ ಸಹ ಮಾತಾಡ ಬೇಡ. ನಾನು ನಿನ್ನ ಯುಕ್ತಿವಾದವನ್ನು ಕೇಳುವದಿಲ್ಲ. ಈ ವಿಚಾರ ವನ್ನು ಬಿಡು. ಇಲ್ಲದಿದ್ದರೆ ನನಗೆ ಮೋರೆಯನ್ನು ಕೂಡಾ................

"ಇರಲಿ. ರಾಣೀ, ಈಗ ಸುಮ್ಮನಿರು" ಎಂದು ಅನ್ನುತ್ತ ಅವನೀ ನಾಥನೂ, ಕಾಲಿಕಿಶೋರನೂ ಅಲ್ಲಿಗೆ ಬಂದರು. ಮಗಳ ಅವಸ್ಥೆಯನ್ನು ನೋಡಿ ಅವನೀನಾಥನು ಅವಳ ಉಪಚಾರದಲ್ಲಿ ಮಗ್ನನಾದನು. ಕಾಲೀ ಕಿಶೋರನು:—"ಅಮ್ಮಾ, ಇಷ್ಟೇಕೆ ಕೋಪಗೊಳ್ಳುವಿ? ನಿನ್ನ ಮಗನು ಬುದ್ಧಿವಂತನಲ್ಲವೇ? ಅವನ ತಲೆಯ ಮೇಲೆ ಎಂಥ ಮಹತ್ಕಾರ್ಯದ ಭಾರ ವಿರುವದು? ಅವನು ಪೂರ್ಣ ವಿಚಾರಮಾಡದೆ ಯಾವ ಕೆಲಸಗಳನ್ನೂ ಮಾಡುವದಿಲ್ಲ ಎಲ್ಲ ಪಂಡಿತರನ್ನು ಕರೆಯಿಸಿರುವನು. ತಡೆಯಿರಿ. ನೀವು ಮೊದಲು ಕಿಶೋರಿಯ ಉಪಚಾರ ಮಾಡಿರಿ, ಎಂದೆಂದು ಯದುನಾರಾ ಯಣನನ್ನು ಕರೆದುಕೊಂಡು ಬೇರೆ ಕಡೆಗೆ ಹೋದನು.

---

೪

ಸೇನಾಪತಿಯಾದ ಕಾಶಿಮುಖಾನನು ವಿಜಯವನ್ನು ಹೊಂದಿ ಗೌಡಕ್ಕೆ ತಿರುಗಿ ಬಂದನು. ಅವನು ಬಂದಾಗ ಯದುನಾರಾಯಣನು ರಾಜಧಾನಿಯಲ್ಲಿ ಇದ್ದಿಲ್ಲ ಉಳಿದ ಮಂತ್ರಿಗಳು ಆದರದಿಂದ ಅವನ ಸ್ವಾಗತವನ್ನು ಮಾಡಿದರು. ಈ ಸ್ವಾಗತ ಸಮಾರಂಭದಲ್ಲಿ ಹಿಂದು ಜನರಿ ಗಿಂತ ಮುಸಲ್ಮಾನ ಜನರೇ ಹೆಚ್ಚು ಇದ್ದರು.

ಖಾನನು ದಾರಿಯಲ್ಲಿ ಗಣೇಶನಾರಾಯಣನ ಮರಣ ವಾರ್ತೆಯನ್ನು ಕೇಳಿದ್ದನು. ರಾಜನು ಖಾನನನ್ನು ಮಗನಂತೆ ಪ್ರೀತಿಸುತ್ತಿದ್ದನು. ಆದ ರಿಂದ ಆ ವಾರ್ತೆಯನ್ನು ಕೇಳಿ ಅವನಿಗೆ ಬಹಳ ದುಃಖವಾಯಿತು. ಇದ ಲ್ಲದೆ ಖಾನನು ಮನಸ್ಸಿನಲ್ಲಿ:—ಯುದ್ಧದಿಂದ ಬಂದ ಕೂಡಲೆ ರಾಜನು ತನ್ನ ಕೂಡ ಅಶಮಾನಳ ವಿವಾಹ ಮಾಡುವನೆಂದು ಭಾವಿಸಿದ್ದನು.

ಮರಣ ವಾರ್ತೆಯಿಂದ ಅದು ಮತ್ತೆ ಕಾಲಹಿಂಬವೆಂದು ನಿರುತ್ಸಾಹ ಗೊಂಡನು. ಕಾಶೀಮನು ಗೌಡರಾಜಧಾನಿಯಲ್ಲಿ ಪ್ರವೇಶ ಮಾಡಿದ ಕೂಡಲೆ ಅವನ ನಜರಿಗೆ ಮುಸಲ್ಮಾನರು ಹಿಂದೂ ಪ್ರಾಧಾನ್ಯವನ್ನು ಖಂಡಿಸಲು ಸಿದ್ಧರಿರುವರೆಂಬುದು ಕಂಡು ಬಂದಿತು. ಹಿಂದುಗಳೂ ಮೊದಲಿನಂತೆ ಮುಸಲ್ಮಾನರ ಸಂಗಡ ಕೂಡಿ ನಡಿಯುತ್ತಿದ್ದಿಲ್ಲ. ಹಿಂದೂ ಪ್ರಧಾನಿಗಳು ಸ್ವಾಗತದಲ್ಲಿ ಮನಃಪೂರ್ವಕವಾಗಿ ಭಾಗ ತೆಗೆದುಕೊಂಡಿದ್ದಿಲ್ಲ. ಇದೆಲ್ಲವನ್ನು ನೋಡಿ ಖಾನನ ಸ್ವಜಾತಿಯ ಅಭಿಮಾನವು ಮತ್ತೆ ತಲೆಯೆತ್ತಿತು. ಮೊದಲು ಅವನು ಅಶಮಾನಳಿಗೆ ಭೆಟ್ಟಿಯಾಗಿ ವಿಜಯದ ಬಗ್ಗೆ ಸಹಾನುಭೂತಿಯನ್ನು ಪಡೆದು ಧನ್ಯನಾಗಬೇಕೆಂದು ಅಂತಃಪುರಕ್ಕೆ ಹೋದನು. ಯದುನಾರಾಯಣನ ಸಂಬಂಧ ಜನವಾರ್ತೆಯು ಇನ್ನೂ ಆತನ ಕಿವಿಗೆ ಮುಟ್ಟಿದ್ದಿಲ್ಲ.

ಅಶಮಾನಳು ತನ್ನ ಬಲಗೈ ಅಂಗೈಯನ್ನು ಗದ್ದಕ್ಕೆ ಇಟ್ಟುಕೊಂಡು ಚಿಂತಾಕ್ರಾಂತಳಾಗಿ ಕುಳಿತಿದ್ದಳು. ಮುಖವು ಬಾಡಿದೆ ಅವಳು ಮನಸ್ಸಿನಲ್ಲಿ:—“ದೇವರೇ ಎಲ್ಲ ವಿಘ್ನಗಳನ್ನು ನಾಶಮಾಡಿ ಉಭಯ ಜಾತಿಗಳ ಐಕ್ಯವೆಂಬ ಸೇತುವೆಯನ್ನು ದೃಢಪಡಿಸು,” ಎಂದು ಬೇಡಿಕೊಳ್ಳುತ್ತಿದ್ದಳು. ಅಷ್ಟರಲ್ಲಿ ಒಬ್ಬ ದಾಸಿಯು ಬಂದು:—ಸೇನಾಪತಿ ಕಾಶೀಮಖಾನರು ತಮ್ಮ ದರ್ಶನಾಪೇಕ್ಷಿಯಾಗಿ ದ್ವಾರದಲ್ಲಿ ನಿಂತಿರುವರು, ಎಂದು ಹೇಳಿದಳು. ಅಶಮಾನಳು ಕ್ಷಣಹೊತ್ತು ದಾಸಿಯ ಮುಖವನ್ನು ದಿಟ್ಟಿಸಿ ನೋಡಿ, ನಂತರ ತಾನೇ ಎದ್ದು ಬಾಗಿಲಿಗೆ ಬಂದು:—ಬರಬೇಕು, ಖಾನಸಾಹೇಬ, ನಿಮ್ಮ ಪಾದ ಧೂಳಿಯಿಂದ ನಮ್ಮ ಮಂದಿರವು ಪವಿತ್ರವಾಗಲಿ, ಎಂದಳು. ಖಾನಸಾಹೇಬರು ಒಳಗೆ ಬಂದು ಯಥಾ ಯೋಗ್ಯವಾಗಿ ಅಭಿವಾದನ ಮಾಡಿ:—ಇದು ನನ್ನ ಸೌಭಾಗ್ಯವೇ ಸರಿ; ಎಂದನು.

ಅಶಮಾನ:—ಖಾನಸಾಹೇಬ, ನಮ್ಮ ಮೇಲಿನ ನಿಮ್ಮ ಉಪಕಾರವನ್ನು ಎಷ್ಟು ವರ್ಣಿಸಲಿ? ಇಂದು ಇಡೀ ಗೌಡ ಸಾಮ್ರಾಜ್ಯವೇ ನಿಮ್ಮ ಉಪಕಾರದಿಂದ ಬದ್ಧವಾಗಿರುವದು. ನೀವು ಮುಸಲ್ಮಾನ ಧರ್ಮಕ್ಕೆ ಗೌರವ ಸ್ವರೂಪರು. ಗೌಡರಾಜ್ಯದ ಆಧಾರಸ್ತಂಭರು. ನಿಮ್ಮ ಅತುಲ ಪರಾಕ್ರಮವು ದಿಲ್ಲಿಯ ರಾಜನನ್ನು ವಿಫಲಮನೋರಥವುಳ್ಳವನನ್ನಾಗಿ ಮಾಡಿತು. ಎಲ್ಲ ಬಗೆಯಿಂದಲೂ ನಿಮ್ಮ ಜೀವನವು ಅಮೂಲ್ಯವು.

ಖಾನನಿಗೆ ಬಹಳ ಆನಂದವಾಯಿತು. ಅವನು:—ಶಹಜಾದೀ, ನನ್ನ ವಿಷಯದಲ್ಲಿ ನಿಮ್ಮ ಅಂತಃಕರಣಪೂರ್ವಕ ಭಾವನೆ ಇರುವದರಿಂದ ನನ್ನ ಸಾಮಾನ್ಯ ಗುಣವು ಕೂಡ ನಿಮ್ಮಿಂದ ಗೌರವವನ್ನು ಪಡೆಯುವದು ನಿಮ್ಮ ಪ್ರೀತಿಯ ಬಲದಿಂದಲೇ ನನಗೆ ಯುದ್ಧದಲ್ಲಿ ಜಯವು. ನನ್ನ ಮಂಗಲ ವಿಷಯದಲ್ಲಿಯ ನಿಮ್ಮ ಉತ್ಕಟೇಚ್ಛೆಯೇ ನನ್ನ ಕಾರ್ಯಸಿದ್ಧಿಗೆ ಅನುಕೂಲವು

ಅಶಮಾನಳು ಸರಳ ಮನಸ್ಸಿನಿಂದ:—ಹೌದು ಖಾನಸಾಹೇಬ, ನಿಮ್ಮ ಮೇಲೆ ನನ್ನ ಪ್ರೀತಿ ಬಹಳ. ನಿಮ್ಮ ಉದಾರ ಅಂತಃಕರಣ, ವೀರತ್ವ ಮೊದಲಾದ ಸುಗುಣಗಳ ಆಕರ್ಷಣದಿಂದ ಸಹಜವಾಗಿ ನಿಮ್ಮ ಮೇಲೆ ಆತ್ಮೀಯ ಭಾವನೆಯುಂಟಾಗಿರುವದು. ನಾನು ನಿಮ್ಮ ಗುಣಗಳಿಗೆ ಮುಗ್ಧಳಾಗಿರುವೆನು. ನಿಮ್ಮ ಉಪಕಾರವನ್ನು ಈ ಜನ್ಮದಲ್ಲಿ ತೀರಿಸಲಿಕ್ಕೆ ಅಸಮರ್ಥಳು.

ಕಾಶೀಮನ ಕಂಠವು ಹಿಮ್ಮಿಂದೊಮ್ಮೆ ಜಡವಾಯಿತು. ಅವನು ಕೆಮ್ಮಿ ಗಂಟಲವನ್ನು ಸರಳ ಮಾಡಿಕೊಂಡು:—ಶಹಜಾದೀ, ನೆನಪಿನಲ್ಲಿ ಇರುವದೇನು?

ಯಾವ ಸಂಗತಿಯು?

ತಾನಾನೂರ ರಣಭೂಮಿಯಲ್ಲಿ ಮೃತಪಿತನ ಸನ್ನಿಧಿಯಲ್ಲಿ ನೀವು....

ಅಶಮಾನಳ ಕಂಠವು ಬಿಗಿಯಿತು ದುಃಖದಿಂದ ಕಣ್ಣು ಹಿಂಚಿ ಕೊಂಡು:—"ಹೌದು, ಖಾನಸಾಹೇಬ, ಅದು ನನ್ನ ಆಜೀವನ ನೆನಪಿನಲ್ಲಿಡತಕ್ಕ ಸಂಗತಿಯು"

ಅಂದು ನೀವು ನನಗೆ ಪುರಸ್ಕಾರವನ್ನು ಕೊಡಲಿಕ್ಕೆ ಬಂದಿದ್ದಿರಲ್ಲವೆ?

"ಹೌದು, ಅಂದಿನ ದಿವಸ ನಾನು ನಿಮಗೆ ನನ್ನ ಮುತ್ತಿನ ಹಾರವನ್ನು ಕೊಡಲು ಪ್ರಯತ್ನಿಸಿದೆನು. ಹೀಗೆ ನಿಮ್ಮ ಉದಾರತನದ ಬೆಲೆ ಕಟ್ಟುವ ನಾನು ಹುಚ್ಚಿಯೇ ಸರಿ."

ಕಾಶೀಮ:—ಆ ವೇಳೆಯಲ್ಲಿ ನಾನು ನನ್ನ ಕರ್ತವ್ಯವನ್ನು ಮಾಡಿದ್ದರಿಂದ ಪುರಸ್ಕಾರವನ್ನು ಸ್ವೀಕರಿಸಲಿಲ್ಲ; ಮತ್ತು ಅದು ಪುರಸ್ಕಾರಕ್ಕೆ ಯೋಗ್ಯ ಸಮಯವೂ ಆಗಿದ್ದಿಲ್ಲ; ಆದರೆ ಇಂದು....ಇಷ್ಟು ಮಾತಾಡಿ ಕಾಶೀಮನು ಕರವಸ್ತ್ರದಿಂದ ಮುಖವನ್ನು ಒರಸಿಕೊಳ್ಳುತ್ತ ಸುಮ್ಮನಾದನು.

ಅಶಮಾನಳಿಗೆ ಆಶ್ಚರ್ಯವಾಯಿತು. ಮುಂದಿನ ಸಂಗತಿಯನ್ನು ಕೇಳುವ ಜಿಜ್ಞಾಸೆಯು ಹೆಚ್ಚಾಯಿತು. ಅವಳು:—ಇಂದು ಮತ್ತೇನು ಹೇಳಿರಿ? ಎಂದಳು.

ಕಾಶೀಮ:—ಶಹಜಾದೀ, ಇಂದು ನಾನು ಆ ಪುರಸ್ಕಾರವನ್ನು ಬೇಡುತ್ತೇನೆ. ನೀನು ನನ್ನ ಬೇಡುವಿಕೆಯು ಅಯೋಗ್ಯವೆಂದು ತಿರಸ್ಕರಿಸಬೇಡ. ನನ್ನನ್ನು ಪ್ರೀತಿಸುವೆನೆಂದು ನೀನೇ ಒಪ್ಪಿರುವಿ; ಆ ಪ್ರೀತಿಯು ಸಾರ್ಥಕವಾಗಲಿ. ನಾನೂ ನಿನ್ನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತೇನೆ. ನಮ್ಮಿಬ್ಬರ ನಡುವಿನ ಭೇದವು ಇಂದು ಇಲ್ಲದಂತೆ ಆಗಲಿ! ಇಬ್ಬರ ಹೃದಯುಗಳೂ ಏಕರೂಪವಾಗಲಿ!!

ಖಾನನ ಮಾತು ಮುಗಿಯುವದರೊಳಗೆ ಅಶಮಾನಳು ಸ್ಥಳಬಿಟ್ಟು ಒಂದೆರಡು ಹೆಜ್ಜೆ ಹಿಂದಕ್ಕೆ ಸರಿದಳು. ಅವಳ ಕಣ್ಣುಗಳು ವಿಸ್ತೃತವಾದವು. ಮುಖವು ಗಂಭೀರವಾಯಿತು ಖಾನನು ಅವಳ ಕಡೆಗೆ ದಿಟ್ಟಿಸಿ ನೋಡಿದನು. ಮುತ್ತಿನ ಸರವು ಅವಳ ಕಂಠದಲ್ಲಿ ಇದ್ದಿಲ್ಲ. ಖಾನನು ಧೈರ್ಯವನ್ನು ತಂದುಕೊಂಡು:—ಶಹಾಜಾದೀ, ನನ್ನ ತಪ್ಪನ್ನು ಕ್ಷಮಿಸು. ನಾನು ನಿನ್ನ ಅಪಮಾನ ಮಾಡಲು ಬಂದಿಲ್ಲ. ಪ್ರೇಮ ಭಿಕ್ಷಾರ್ಥಿಯಾಗಿ ಬಂದಿರುತ್ತೇನೆ. ನನ್ನ ಈ ಲಾಲಸೆಯನ್ನು ಹೆಚ್ಚಿಸಿದವಳು ನೀನೇ. ನಿಮ್ಮ ಪ್ರೇಮ-ಆದರಗಳಿಂದ ನನ್ನ ಮನಸ್ಸಿನಲ್ಲಿ ನೂತನ ಭಾವನೆಯು ಅಂಕುರಿಸಿ ಚಿಗಿತು ಫಲಕ್ಕೆ ಬಂದಿರುವದು. ಇಂದು ಅದರ ಸಾರ್ಥಕವಾಗಲಿ ಶಹಾಜಾದೀ, ಈ ದೀನನು ಬೇಡುವ ಪ್ರೇಮಭಿಕ್ಷೆಯ ಮೊದಲಿನ ಗುರ್ತಿಗಾಗಿ ನನಗೆ ಈ ಮೊದಲೇ ಸಲ್ಲತಕ್ಕ ಮುತ್ತಿನ ಆ ಹಾರವನ್ನು ಇಂದು ನನಗೆ ಕೊಡು. ಇಂದು ಆ ಹಾರವು ನಿನ್ನ ಕಂಠವನ್ನು ಶೋಭಿಸದಿದ್ದ ಕಾರಣವೇನು?

ಅಶಮಾನಳು ತನ್ನ ಚಂಚಲ ಮನಸ್ಸನ್ನು ಬಿಗಿಹಿಡಿದು ಶಾಂತಸ್ವರದಿಂದ:—ಖಾನಸಾಹೇಬ, ಅಂದು ನಿಮಗೆ ಮುತ್ತಿನ ಹಾರವನ್ನು ನಿಮ್ಮ ಯಾವ ಯೋಗ್ಯತೆಯ ಸಲುವಾಗಿ ಕೊಡಬೇಕೆಂದು ಮಾಡಿದ್ದೆನೋ ಆ ಯೋಗ್ಯತೆಯು ಅಂದಿಗೆ ನಿಮ್ಮಲ್ಲಿ ಇತ್ತು; ಮತ್ತು ಈಗಲೂ ಇರುವದು; ಆದರೆ ನೀವು ಅಂದಿನ ದಿವಸ ಅದನ್ನು ಸ್ವೀಕರಿಸದೆ ನಿಮ್ಮ ಔದಾರ್ಯವನ್ನು ಹೆಚ್ಚು ಉಜ್ವಲ ಮಾಡಿಕೊಂಡಿರಿ. ಈಗ ಆ ಸರವನ್ನು ನೀವು ಯಾವ ಉದ್ದೇಶದಿಂದ ಇಚ್ಛಿಸುವಿರೋ, ಇದಕ್ಕೂ ಅಂದಿನ ಉದ್ದೇಶಕ್ಕೂ ಸಂಬಂ

ಘವೇ ನಿಲ್ಲ; ಮತ್ತು ಈ ಹೇತುವಿನಿಂದ ಆ ಹಾರವನ್ನು ಇಚ್ಛಿಸಿದರೆ ಅದನ್ನು ಪೂರ್ಣ ಮಾಡುವ ಸಾಮರ್ಥ್ಯವೂ ನನ್ನಲ್ಲಿಲ್ಲ.

ಕಾಶೀಮ:—ಅದೇಕೆ?

ಅಶಮಾನ:—ಅದನ್ನು ನೀವು ಕೇಳಬಾರದು; ಮತ್ತು ಅದರ ಬದಲು............

ಕಾಶೀಮನು ನಡುವೇ:—ಅದರ ಬದಲು ತೆಗೆದುಕೊಂಡು ಮಾಡುವದೇನು? ನಾನು ಅದು ಬೆಲೆಯುಳ್ಳದ್ದೆಂದು ಆಶೆ ಪಡುವದಿಲ್ಲ. ನಾನು ಕೇವಲ ಅಶಮಾನತಾರಾಳ ಪ್ರಣಯವನ್ನು ಇಚ್ಛಿಸುವೆನು.

ಅಶಮಾನಳ ಕಣ್ಣು ಕೆಂಪಗಾದವು. ಅವಳು ಉತ್ತೇಜಿತ ಸ್ವರದಿಂದ:—ಖಾನಸಾಹೇಬ, ನೀವು ಸುಜ್ಞರು; ಚತುರರು. ಹೀಗಿದ್ದು ನಾನು ಹೇಳುವ ಮಾತಿನ ಅರ್ಥವು ನಿಮಗ ತಿಳಿಯಬಾರದೇನು?

ಕಾಶೀಮನಿಗೆ ಸಹನವಾಗಲಿಲ್ಲ. ಅವನು:—ಕಾಶೀಮನು ಅಷ್ಟು ಮೂರ್ಖನಲ್ಲ; ಆದರೆ ಆ ಸರದ ಸದ್ಯದ ಅಧಿಕಾರಿಯು ಯಾರೆಂಬದನ್ನು ತಿಳಿಸೋಣವಾಗಬೇಕು. ಆ ಮಹಾತ್ಮನೇ ತಮ್ಮ ಪ್ರೇಮಪಾತ್ರನು.

ಅಶಮಾನ:—ಅದರ ಗೊಡವೆಯು ನಿನಗೇಕೆ?

ಕಾಶೀಮ:—ಓಹೋ! ಶಹಾಜಾದಿಯ ಪ್ರೇಮಪಾತ್ರನು ಹೆಸರು ಕೂಡ ತಿಳಿಸದಷ್ಟು ಹೀನಪಾತ್ರನೆಂಬದು ಈಗ ತಿಳಿಯಿತು. ಅವನ ನಾಮನಿರ್ದೇಶವು ಸಂಕಟಕ್ಕೆ ಕಾರಣವಾಗಬಹುದಲ್ಲವೇ?

ಅಶಮಾನತಾರಾಳಿಗೆ ಸಿಟ್ಟು ಬಂದಿತು. ಅವಳು:—ಕಾಶೀಮಖಾನ, ನಿನ್ನಿಂದ ಅಜೀಮಕನ್ಯೆಯು ಉಪಕೃತಳಾದ್ದರಿಂದ ನಿನ್ನ ಈ ಅಪರಾಧವನ್ನು ಕ್ಷಮಿಸಿರುವಳು. ಹಾಗಾದರೆ ಕೇಳು. ತಂದೆಯ ಅಂತಿಮ ಆಜ್ಞೆಯ ಪ್ರಕಾರ ನನ್ನ ತಂದೆಯ ಶತ್ರುವಿನ ನಾಶಕನಾದ ಹಿಂದೂ-ಮುಸಲ್ಮಾನರ ಐಕ್ಯದೀಕ್ಷೆಯಿಂದ ಬದ್ಧನಾದ ಗೌಡಪ್ರತಿನಿಧಿ ಯದುನಾರಾಯಣನೇ ನನ್ನ ಪತಿಯು. ತಿಳಿಯಿತೇ; ಇನ್ನು ನನ್ನ ಹತ್ತಿರ ಕೇಳತಕ್ಕದ್ದೇನೂ ಇಲ್ಲವಷ್ಟೆ? ನನಗೆ ತಂದೆಯ ಸಮಾಧಿಯ ಹತ್ತಿರ ಹೋಗುವ ವೇಳೆಯಾಗಿದೆ. ನಿನಗೂ ಹೋಗಲಿಕ್ಕೆ ಅಪ್ಪಣೆ ಕೊಟ್ಟಿರುವೆನು.

ಕಾಶೀಮನು ಸ್ತಂಭಿತನು. ಜಗತ್ತೇ ಅವನ ಪಾಲಿಗೆ ಶೂನ್ಯವು! ನಿರಾಶೆ-ಕ್ರೋಧ-ಸಂತಪ್ತನಾದ ಅವನು:—ಶಹಾಜಾದೀ, ನನ್ನ ಮಾತು

ಗಳನ್ನಿಷ್ಟು ಲಕ್ಷಪಡಿಸು "ನಿಮ್ಮ ಈ ಅಧರ್ಮಾಚರಣೆಯನ್ನು ಮುಸಲ್ಮಾನ ಸಮಾಜವು ಸುಮ್ಮನೆ ಸಹಿಸದು; ಪಠಾಣ ರಾಜಕುವರಿಯು ಹಿಂದೂ ಪತಿಯನ್ನು ವರಿಸುವದು ಲಾಂಛನವು ಮುಸಲ್ಮಾನರಲ್ಲಿ ಯೋಗ್ಯರೇ ಇಲ್ಲವೇನು? ಇದರಿಂದ ಇಡಿ ಸಮಾಜದ ಗೌರವವು ಕಡಿಮೆಯಾಗುವದು. ಈ ವಿಷಯದಲ್ಲಿ ಕಡೆಗೆ ನೀವು ಪಶ್ಚಾತ್ತಾಪಪಡುವಿರಿ" ಎಂದು ಹೇಳಿ, ಮರ್ಯಾದೆಗನುಸರಿಸಿ ಅಭಿವಾದನ ಮಾಡಿ, ಹೊರಟು ಹೋದನು.

---

೭

ನವದ್ವೀಪ ಮೊದಲಾದ ಎಲ್ಲ ಸ್ಥಳಗಳಿಂದ ಪಂಡಿತರು ಬಂದರು. ಮುಸಲ್ಮಾನರನ್ನು ಶುದ್ಧಿಗೊಳಿಸಿ ಹಿಂದೂಧರ್ಮದಲ್ಲಿ ತೆಗೆದುಕೊಳ್ಳಲಿಕ್ಕೆ ಬರುತ್ತದೋ ಹೇಗೆ, ಇದೇ ಚರ್ಚೆಯು ಮುಖ್ಯ ವಿಷಯವು. ಈ ವಿಷಯದಲ್ಲಿ ಬಹಳ ತರ್ಕವಿತರ್ಕಗಳಾಗಿ ಪ್ರಾಯಶ್ಚಿತ್ತದಿಂದ ಮುಸಲ್ಮಾನರು ಹಿಂದುಗಳಾದರೂ ಅವರು ಬ್ರಾಹ್ಮಣರಾಗುವದಿಲ್ಲ. ಅತಿ ಶೂದ್ರರೆಂದು ಎಣಿಸಲ್ಪಡಬೇಕು. ಅಂದರೆ ಈಗಿನ ಪರಿಸ್ಥಿತಿಗಿಂತ ಹೆಚ್ಚಾಗಿ ಅಸ್ಪೃಶ್ಯರು ಅಂದ ಬಳಿಕ ರಾಜಕನ್ನಿಕೆಯು ಬ್ರಾಹ್ಮಣಿಯಾಗಲಾರಳು.

ಯದುನಾರಾಯಣನ ಇಚ್ಛೆಯು ಕೈಗೂಡಲಿಲ್ಲ. ಜಮಾನಳ ತ್ಯಾಗಮಾಡುವ ಮನಸ್ಸು ಅವನಿಗಿದ್ದಿಲ್ಲ. ಹಿಂದೂ-ಮುಸಲ್ಮಾನರ ಐಕ್ಯವೇ ಅವನ ಜೀವನವು. ಯಾವ ಆಶೆಯು ಕ್ಷೀಣರಶ್ಮಿಯನ್ನು ನಂಬಿ ಬಂದಿದ್ದನೋ ಅದು ನಿಷ್ಫಲವು. ಧರ್ಮತ್ಯಾಗ ಮಾಡಬೇಕೋ, ಕರ್ತವ್ಯವನ್ನು ತ್ಯಾಗಮಾಡಬೇಕೋ? ತಿಳಿಯುವ ಹಾಗಾಯಿತು. ಈ ವರೆಗೆ ಅವನು ತನ್ನ ಧರ್ಮದ ಬಗ್ಗೆ ಬಹಳ ಆದರವುಳ್ಳವನಾಗಿದ್ದನು. ಇನ್ನು ತಾನು ಆರಂಭಿಸಿದ ಕಾರ್ಯದ ಉದ್ದೇಶವು ಅತಿ ಮಹತ್ವವುಳ್ಳದ್ದು. ಕಡೆಗೆ ಅವನು ಧರ್ಮತ್ಯಾಗವನ್ನೇ ನಿಶ್ಚಯಿಸಿ, ಅಂದಿನ ರಾತ್ರಿ ಗುಪ್ತವಾಗಿ ಗೌಡಕ್ಕೆ ತಿರುಗಿ ಹೋಗಬೇಕೆಂದು ನಿರ್ಧರಿಸಿದನು. ಮಾತೃಭೂಮಿಯನ್ನು ಅವನು ತ್ಯಾಗಮಾಡಿದನೆನ್ನುವದಕ್ಕಿಂತ, ಮಾತೃಭೂಮಿಯೇ ಅವನನ್ನು ತ್ಯಾಗಮಾಡಿದಳೆನ್ನಬಹುದು. ಯದುನಾರಾಯಣನು ರಾಜಾ ಗಣೇಶನಾರಾಯಣನ ಏಕಮಾತ್ರ ಪುತ್ರನು. ಗೌಡದ ಪ್ರತಿನಿಧಿಯು; ಆದರೆ ಕಳ್ಳನಂತೆ ರಾತ್ರಿ ಕಣ್ಣು ತಪ್ಪಿಸಿ ಹೊರಡಬೇಕಾಯಿತು. ಅವನು ಮನೆ

ಯನ್ನು ಬಿಟ್ಟು ಹೊರಡುವಾಗ ಒಮ್ಮೆ ತನ್ನ ಶಯನ ಮಂದಿರದ ಕಡೆಗೆ ನೋಡಿದನು. ಆ ಮಧ್ಯರಾತ್ರಿಯ ಗಾಢಾಂಧಕಾರದಲ್ಲಿ ಆ ವಿಶಾಲ ಪ್ರಾಸಾದವು ಹಿಮಾಚಲದಂತೆ ಭಾಸವಾಯಿತು. ಅವನಿಗೆ ಏನೂ ಕಾಣ ಲಿಲ್ಲ ಅವನು ನಿಟ್ಟುಸಿರು ಬಿಟ್ಟು ಜಡಸ್ವರದಿಂದ:—"ಕಿಶೋರಿ, ನಾನು ಹೊರಟೆನು; ನೀನು ನಿದ್ದೆ ಮಾಡು" ಎಂದನು.

ಒಮ್ಮಿಂದೊಮ್ಮೆ ಆ ಅಂಧಕಾರಮಯ ಕೋಣೆಯ ತೆರೆದ ಕಿಡಕಿ ಯೊಳಗಿಂದ ಆರ್ತ ಕರುಣಸ್ವರವು ಕೇಳಿಸಿತು. ಅವನು ಮಾತ್ರ ಸ್ವಲ್ಪ ಹೊತ್ತು ಆ ಕಡೆ ನೋಡಿದನು. ತಿರುಗಿ ಯಾವದೂ ಕೇಳಲಿಲ್ಲ. ಕೂಡಲೆ ಅವನು ಅವಸರದಿಂದ ಆ ಸ್ಥಳವನ್ನು ತ್ಯಜಿಸಿದನು.

ಅಂದಿನ ರಾತ್ರಿ ಕಿಶೋರಿಯು ತನ್ನ ಪತಿದೇವನ ಮಾರ್ಗಪ್ರತೀಕ್ಷೆ ಯನ್ನು ಬಹಳ ಹೊತ್ತಿನ ವರೆಗೆ ಮಾಡಿದಳು. ಅವಳ ಮನಸ್ಸಿಗೆ ಶಾಂತಿ ಯಿಲ್ಲ. ಒಮ್ಮೆ ಕಿಡಕಿಯ ಕಡೆಗೆ ನೋಡುವಳು. ಒಮ್ಮೆ ಬಾಗಿಲ ಕಡೆಗೆ ನೋಡುವಳು. ತನ್ನ ಕಾಲ ಸಪ್ಪಳಕ್ಕೆ ತಾನೇ ಚಮಕಿತಳಾಗಿ ಪತಿಯು ಬಂದನೆಂದು ಭಾವಿಸುವಳು ಹೀಗೆ ರಾತ್ರಿಯ ಬಹಳ ಭಾಗವು ಕಳೆಯಿತು. ಕಡೆಗೆ ಮಲಗಿದಲ್ಲಿಯೇ ಸ್ವಲ್ಪ ಜಂಪು ಹತ್ತಿತು. ಇಷ್ಟರಲ್ಲಿ ಕಿಡಿಕಿಯೊಳ ಗಿಂದ ಗಾಳಿಯು ಬಂದು ದೀಪವು ಶಾಂತವಾಯಿತು. ಅವಳಿಗೆ ಅದು ಗೊತ್ತಿದ್ದಿಲ್ಲ.

ಕಿಶೋರಿಗೆ ಒಂದು ಭೀಷಣವಾದ ಸ್ವಪ್ನವು ಬಿತ್ತು. ಯದುನಾರಾ ಯಣನು ಸಂಸಾರತ್ಯಾಗ ಮಾಡಿ ಹೊರಟಿರುವನು. ತಾನು ಪುತ್ರ ಅನೂ ಪನನ್ನು ಎತ್ತಿಕೊಂಡು ಅವನ ಹಿಂದೆ ಬೆನ್ನು ಹತ್ತಿರುವಳು. ಅವಳ ಕೋಮ ಲವಾದ ಪಾದಗಳು ಮುಳ್ಳು-ಕಲ್ಲುಗಳಿಂದ ಘಾಯವಾಗಿ ರಕ್ತವು ಹರಿಯ ಹತ್ತಿತು. ಅದರ ಪರಿವೆಯಿಲ್ಲದೆ ಏಕಾಗ್ರಚಿತ್ತದಿಂದ ಪತಿಯನ್ನು ಅನು ಸರಿಸಿರುವಳು. ಪತಿಯು ಸಮೀಪದಲ್ಲಿ ಸಿಕ್ಕಂತೆ ಭಾಸವಾಗಿ ದೂರವಾಗುತ್ತಿ ದ್ದನು. ಬಹಳಹೊತ್ತಿನ ಮೇಲೆ ನಿತ್ರಾಣಳಾಗಿ ಕಾಲಿಡಲಿಕ್ಕೆ ಕೂಡ ಅಸಮ ರ್ಥಳಾಗಿ:—ಪತಿದೇವ, ಈ ದೀನಳ ಮೇಲೆ ಇಷ್ಟು ಕೋಪವೇಕೆ? ಸ್ವಲ್ಪ ನಿಲ್ಲಿರಿ; ಒಮ್ಮೆ ಈ ಕುಮಾರನನ್ನು ಎತ್ತಿಕೊಳ್ಳಿರಿ. ನಾನೂ ನೀವು ಹೋದಲ್ಲಿಗೆ ಬರುತ್ತೇನೆ; ಎಂಥ ಕಷ್ಟಗಳನ್ನಾದರೂ ಅನುಭವಿಸುತ್ತೇನೆ. ನೀವೇ ಹೀಗೆ ಮಾಡಿದ ಮೇಲೆ ನನಗೆ ಗತಿ ಯಾರು? ಎಂದಳು. ಆಗ ಪತಿಯು ದೂರ

ದಿಂದಲೇ ಗಟ್ಟಿಯಾಗಿ:—“ಕಿಶೋರೀ, ತಿರುಗು ಹಿಂದಕ್ಕೆ; ನಾನು ಹೋ-ಗುವ ಸ್ಥಳವು ನಿನ್ನದಲ್ಲ. ಅಲ್ಲಿಗೆ ಬರುವ ಸಾಮರ್ಥ್ಯವು ನಿನ್ನದಲ್ಲ ನನಗೆ ಅನೇಕ ಮಹತ್ಕಾರ್ಯಗಳಿದ್ದದರಿಂದ ನಿನ್ನ ಬಂಧನವನ್ನು ಕಡಿದುಕೊಂಡು ಹೊರಟಿರುವೆನು. ನೀನು ಮಹಾ ಪತಿವ್ರತೆಯು. ಸೀತಾದೇವಿಯಂತೆ ಆದರ್ಶಳು. ನೀನು ಸತಿ ಯಶೋಧರೆಯ ಅನುಕರಣವನ್ನು ಮಾಡು” ಎಂದನು. ಕಡೆಗೆ ಕಿಶೋರಿಯು ಕಷ್ಟದಿಂದ:— “ಹಾಗಾದರೆ ನಿಮ್ಮ ಕಡೆಯ ಪಾದಧೂಳಿಯನ್ನು ಕೊಟ್ಟು ಅನುಗ್ರಹಿಸಿರಿ” ಎಂದಳು. ಆಗ ಪತಿಯು ದೂರದಿಂದಲೆ:—“ಕಿಶೋರೀ, ಈಗ ನನ್ನ ನಿನ್ನ ದೇಹಸಂಬಂಧವು ಉಳಿದಿಲ್ಲ. ಈ ಜೀವನದ ನಂತರ ಪರಲೋಕದಲ್ಲಿ ನಶ್ವರ ಜಗತ್ತಿನಂತೆ ಸಮಾಜದ ವಿಘ್ನಗಳಿಲ್ಲ. ಅಲ್ಲಿ ನಮ್ಮ ಉಭಯತರ ಅಶರೀರ ಆತ್ಮಗಳ ಮಿಲನವಾಗುವದು. ಈ ಜನ್ಮದಲ್ಲಿ ಮಾತ್ರ ಆಗಲಾರದು” ಎಂದನು. ಹಿಮ್ಮೊಂದೊಮ್ಮೆ ಕಿಶೋರಿಯು ಸ್ವಪ್ನ ಭಂಗವಾಗಿ ಚಟ್ಟನೆ ಚೀರಿದಳು. ಇದೇ ಕೂಗು ಅರಮನೆಯಿಂದ ಹೊರಡುವಾಗ ಯದುನಾರಾಯಣನಿಗೆ ಕೇಳಿಸಿತ್ತು.

ತಾಯಿಯ ಚೀರುವಿಕೆಯಿಂದ ಪಲ್ಲಂಗದ ಮೇಲೆ ಮಲಗಿದ್ದ ಅನೂಪ ನಾರಾಯಣನ ನಿದ್ರಾಭಂಗವಾಗಿ ಅವನೂ ಅಳಹತ್ತಿದನು. ಮಗನ ಅಳುವಧ್ವನಿಯಿಂದ ಕಿಶೋರಿಯು ಎಚ್ಚತ್ತು ಮಗನನ್ನು ಎದೆಗೆ ಅವಚಿ ಕೊಂಡಳು. ಇಷ್ಟರಲ್ಲಿ ತ್ರಿಪುರಾದೇವಿಯು ಅಲ್ಲಿಗೆ ಬಂದು:—ಅಮ್ಮಾ, ಯದುನಾರಾಯಣನು ಇನ್ನೂ ಬಂದಿಲ್ಲವೇನು? ಎಂದಳು.

ಕಿಶೋರಿಯು ನಿರುತ್ತರಳಾಗಿ ಬಿಕ್ಕಿ ಬಿಕ್ಕಿ ಅಳಹತ್ತಿದಳು ಕೂಡಲೆ ರಾಣಿಯು ಕ್ರೋಧಕಂಪಿತಸ್ವರದಿಂದ:—ರಾಜಾ, ಬೇಗನೆ ಏಳು. ಯದು ನಾರಾಯಣನು ಓಡಿಹೋಗಿರುವನು. ಈಗಿಂದೀಗಲೆ ಒಂದು ಸಾವಿರಸೈನ್ಯ ವನ್ನು ಕೊಟ್ಟು ಜಲಮಾರ್ಗವಾಗಿ ಕಳಿಸು; ಅವನನ್ನು ಸೆರೆ ಹಿಡಿದುಕೊಂಡು ಬರಲಿ.

ಆ ಮಧ್ಯರಾತ್ರಿಯಲ್ಲಿ ಅರಮನೆಯು ಜನರ ಕೋಲಾಹಲ ಪೂರ್ಣ ವಾಯಿತು. ಎಲ್ಲರ ಮನಸ್ಸೂ ಚಂಚಲವು.

ಯದುನಾರಾಯಣನು ಮೊದಲಿನಿಂದಲೇ ತನ್ನ ಸಿದ್ಧತೆಯನ್ನು ಮಾಡಿಟ್ಟುಕೊಂಡಿದ್ದನು. ಚಲಕವಿಲದಲ್ಲಿ ವೇಗವುಳ್ಳ ನೌಕೆಯನ್ನೂ,

ಸಂರಕ್ಷಕ ಸೈನ್ಯವನ್ನೂ ಇಟ್ಟಿದ್ದನು. ನೌಕಾರೋಹಣ ಮಾಡಿಕೊಂಡು ಗೌಡಾಭಿಮುಖನಾಗಿ ಹೊರಟನು. ದೂರದಲ್ಲಿ ತನ್ನ ಹಿಂದೆಯೇ ಅನೇಕ ನೌಕಾಗಮನಗಳ ಶಬ್ದವು ಕೇಳುತ್ತಿತ್ತು.

---

೬

ಯದುನಾರಾಯಣನು ಗೌಡಕ್ಕೆ ಬಂದ ಮರುದಿವಸ ನಿತ್ಯದಂತೆ ದರಬಾರಕ್ಕೆ ಹೋದನು. ದರಬಾರದಲ್ಲಿ ಗೌಡಸಿಂಹಾಸನವು ಶೂನ್ಯವು. ಅದರ ಹತ್ತರವೇ ಮತ್ತೊಂದು ಆಸನವು ಪ್ರತಿನಿಧಿಯ ಸಲುವಾಗಿ ಇರುತ್ತಿತ್ತು. ಅದರ ಮೇಲೆ ಕುಳಿತೇ ಈ ವರೆಗೆ ರಾಜ್ಯಭಾರವನ್ನು ನಡೆಸುತ್ತ ಬಂದಿದ್ದರು. ಯೋಗ್ಯ ವೇಳೆಗೆ ಸಭೆಯ ಕಾರ್ಯವು ಆರಂಭವಾಯಿತು. ಮೊದಲಿಗೆ ಸೇನಾಪತಿಯಾದ ಕಾಸೀಮಖಾನನ ಆಮಂತ್ರಣವು. ಕಾಸೀಮಖಾನನು ಬಂದ ಕೂಡಲೆ ಯದುನಾರಾಯಣನು ಎದ್ದು ನಿಂತು, ಖಾನನ ಅಭಿವಾದನಕ್ಕೆ ಸನ್ಮಾನಪೂರ್ವಕ ಪ್ರತಿ ಅಭಿವಾದನ ಮಾಡಿ ತನ್ನ ಹತ್ತರದ ಮತ್ತೊಂದು ಆಸನದ ಮೇಲೆ ಕೂಡ್ರಹೇಳಿ:—ಸೇನಾಪತಿಯಾದ ಕಾಸೀಮಖಾನ, ನೀವು ಯುದ್ಧಕ್ಕೆ ಹೊರಡುವಾಗ ಇದೇ ದರಬಾರದಲ್ಲಿ ಕೈಲಾಸವಾಸಿಗಳಾದ, ನನ್ನ ಪರಮಪೂಜ್ಯ ಪಿತೃಗಳಾದ ಗಣೇಶ ನಾರಾಯಣ ಮಹಾರಾಜರು ನಿಮಗೆ ಅನುಜ್ಞೆಯನ್ನು ಕೊಟ್ಟು ಕಳುಹಿಸಿದ್ದರು. ನೀವು ಜಯಶಾಲಿಗಳಾಗಿ ಬಂದ ವೇಳೆಯಲ್ಲಿ ನಮ್ಮ ದುರ್ದೈವದ ಮೂಲಕ ಅವರು ಪರಂಧಾಮಕ್ಕೆ ಹೋಗಿದ್ದು, ಈಗ ನಿಮ್ಮನ್ನು ಸತ್ಕರಿಸುವ ಭಾರವು ನಮ್ಮ ಮೇಲೆ ಬಿದ್ದಿರುವದು. ನಿಮ್ಮ ರಣಪಾಂಡಿತ್ಯವು ದಿಲ್ಲಿಯ ಬಾದಶಹನ ಗರ್ವವನ್ನು ಖಂಡಿಸಿ ಗೌಡದ ಕೀರ್ತಿಯನ್ನು ಅಜರಾಮರ ಮಾಡಿತು. ನಿಮ್ಮ ಶ್ರಮದ ಪಾರಿತೋಷಕವಾಗಿ ರಾಜಭಾಂಡಾರದಿಂದ ೫ ಸಾವಿರ ಸುವರ್ಣ ಮುದ್ರಿಕೆಗಳನ್ನೂ, ರತ್ನಖಚಿತ ಖಡ್ಗವನ್ನೂ ಕೊಡುವಂತೆ ಫರ್ಮಾಯಿಸಲ್ಪಡುತ್ತದೆ. ನಿಮ್ಮ ಆಗಮನದ ವೇಳೆಯಲ್ಲಿ ಕೆಲವು ಮಹತ್ವದ ಕೆಲಸಗಳ ಮೂಲಕ ನಾನು ರಾಜಧಾನಿಯಲ್ಲಿ ಇದ್ದಿಲ್ಲ. ಆ ಬಗ್ಗೆ ನೀವು ಈ ಮೊದಲೇ ಉದಾರಮನಸ್ಸಿನಿಂದ ಕ್ಷಮಿಸಿರುವಿರೆಂದು ನಂಬಿಗೆಯಿರುವದು.

ಯದುನಾರಾಯಣನು ಅಂತಃಕರಣಪೂರ್ವಕ ಗೌರವಿಸಿದ್ದಕ್ಕೆ

ಖಾನನ ಹೃದಯದಲ್ಲಿ ಯಾವ ಪ್ರತಿಧ್ವನಿಯೂ ಹುಟ್ಟಲಿಲ್ಲ; ಶಿಷ್ಟಾಚಾರ ದಂತೆ ಒಂದೆರಡು ಮಾತಾಡಿ ಕುಳಿತನು ಕೂಡಲೆ ಕಾಶೀಮಖಾನನ ಹೆಸರಿನಿಂದ ಸಭಾಗೃಹವು ದುಮುದುಮಿಸುವಂತೆ ಜಯಜಯಕಾರವನ್ನು ಮಾಡಿದರು. ಜಯಧ್ವನಿಯು ಶಾಂತವಾದ ಕೂಡಲೆ ದರಬಾರದೊಳಗಿನ ಬಹು ಜನರು ತಮ್ಮತಮ್ಮೊಳಗೆ ಗುಣುಗುಣು ಮಾತಾಡಹತ್ತಿದರು. ಯದು ನಾರಾಯಣನು ಇದನ್ನು ನೋಡಿ:—ಬಂಧುಗಳೇ, ಇಂದಿನ ನಿಮ್ಮ ಮುಖ ಭಾವವನ್ನು ನೋಡಿದರೆ ಯಾವದೋ ಒಂದು ಮಹತ್ವದ ಸಂಗತಿಯನ್ನು ಜರುಗಿಸಬೇಕೆಂಬ ಅಭಿಲಾಷೆಯಿದ್ದಂತೆ ತೋರುತ್ತದೆ. ಅದನ್ನು ನಿಸ್ಸಂ ಕೋಚವಾಗಿ ಹೇಳಿರಿ. ಗೌಡವು ಹಿಂದೂ-ಮುಸಲ್ಮಾನರದು. ಇಂದು ನಿರಾಪದವಾಗಿ ಜಯಧ್ವನಿಯಿಂದ ಮೆರೆಯುವ ಪ್ರಸಂಗದಲ್ಲಿ ಮನಸ್ಸಿನಲ್ಲಿ ಸಂಕೋಚವೇಕೆ? ಅದು ಯಾವ ವಿಷಯವಿದ್ದರೂ ನಿಷ್ಪಕ್ಷಪಾತದಿಂದ ಚರ್ಚಿಸಲ್ಪಡುವದು.

ಆಗ ವಜೀರನು ಎದ್ದು ನಿಂತು:—ಖುದಾವಂದ, ಆ ವಿಷಯವು ಕಠಿಣವಾದದ್ದು ಇದಲ್ಲದೆ ಅದು ತಮ್ಮ ಮನಸ್ಸಿನ............

ಯದುನಾರಾಯಣನು ಶಾಂತಮನಸ್ಸಿನಿಂದ:—ಹೇಳಿರಿ. ಸಂದೇಹ ಪಡಬೇಡಿರಿ. ಆ ವಿಷಯವು ನನ್ನ ಮನಸ್ಸಿನ ವಿರುದ್ಧವಾಗಿ ಇರುವದಷ್ಟೆ?

ವಜೀರ:—ಹೌದು.

ಯದು:—ವಜೀರಸಾಹೇಬ, ಇದಕ್ಕೇಕೆ ಇಷ್ಟು ಅನುಮಾನವು? ನನ್ನ ಸುಖಕ್ಕಾಗಿ ಸಾಮ್ರಾಜ್ಯವು ನಡೆಸಲ್ಪಡುವದಿಲ್ಲ ಹಿಂದೂ ಮುಸಲ್ಮಾನ ಮೊದಲಾದ ಎಲ್ಲ ಜಾತಿಗಳ ಸುಖವೇ ನನ್ನ ಮುಖ್ಯ ಹೇತುವು. ಮನಃಪೂರ್ವಕವಾಗಿ ಅಪ್ರಿಯ ವಿಷಯವನ್ನು ಕೂಡ ಕೇಳುವೆನು.

ವಜೀರ:—ಚರ್ಚಿಸುವದನೆ ಮಾಡತಕ್ಕ ಆ ವಿಷಯಗಳು ಎರಡು ಇವೆ. ಎರಡೂ ವಿಷಯಗಳು ಮುಸಲ್ಮಾನರ ಪಕ್ಷದಿಂದಲೇ ಇರುವವು.

ಯದು:—ಇರಲಿ, ಹೇಳಿರಿ.

ವಜೀರ:—ನಿಮ್ಮ ಪೂಜ್ಯಪಿತೃಗಳಾದ ಸ್ವರ್ಗೀಯ ಗಣೇಶನಾರಾಯಣ ಮಹಾರಾಜರ ಮರಣದ ನಂತರ ಜನರ ಮನಸ್ಸಿನಲ್ಲಿ ಈ ಪ್ರಕಾರ ಇರುವದು:- “ಭಾವೀಸಾಮ್ರಾಟನ ಪ್ರತಿನಿಧಿಯು, ಪ್ರತಿಸಾರೆ ಹಿಂದುವೇ ಏಕೆ ಆಗಬೇಕು? ಇದು ಮುಸಲ್ಮಾನರಿಂದ ಪ್ರತಿಷ್ಠಿತವಾದ ಸಾಮ್ರಾಜ್ಯವು;

ಮತ್ತು ಭಾವೀಸಾಮ್ರಾಟನೂ ಮುಸಲ್ಮಾನನು. ಅಂದಬಳಿಕ ಪ್ರತಿನಿಧಿಯೂ ಮುಸಲ್ಮಾನನೇ ಏಕೆ ಆಗಬಾರದು? ಮುಸಲ್ಮಾನ ಸಾಮ್ರಾಜ್ಯದಲ್ಲಿ ರಾಜ್ಯಭಾರವನ್ನು ಮಾಡಲು ಸಮರ್ಥನಾದ ಮುಸಲ್ಮಾನನು ಒಬ್ಬನೂ ಇಲ್ಲವೇನು?" ಈ ಪ್ರಕಾರದ ವಿಚಾರದಿಂದ ಅವರು ಮುಸಲ್ಮಾನ ಪ್ರತಿನಿಧಿಯನ್ನು ಇಚ್ಛಿಸುವರು.

ಯದುನಾರಾಯಣನು ಶಾಂತಮನಸ್ಸಿನಿಂದ:—ಇನ್ನು ನಿಮ್ಮ ಎರಡನೆಯ ವಿಷಯವು ಯಾವದು? ವಜೀರನು ತನ್ನ ಪಕ್ಕವಾದ ಗಡ್ಡಗಳ ಮೇಲೆ ಕೈಯಾಡಿಸುತ್ತ:—ಮಹಾರಾಜ, ಎರಡನೇದು ನಿವೇದನವಲ್ಲ, ಆವೇದನವು. ಅದು ನಿಮ್ಮ ಮೇಲೆ ಅಭಿಯೋಗವು ಅದನ್ನು ಬಾಯಿಂದ ಹೇಳಲು ಮನಸ್ಸೊಪ್ಪದು. ಆದ್ದರಿಂದ ಅದನ್ನು ಬರೆದು ತಂದಿರುತ್ತದೆ. ಆ ವಿಷಯುವು ಮೊದಲು ಜನವಾರ್ತೆಯಿಂದ, ಕಟ್ಟಕಡೆಗೆ ಒಬ್ಬ ಮನುಷ್ಯನು ಸ್ವತಃ ನಿಜವೆಂದು ಸಮರ್ಥನ ಮಾಡಿದ್ದು, ಆ ಮನುಷ್ಯನು ಕೂಡ ಈ ಸಭೆಯಲ್ಲಿಯೇ ಇರುವನು, ಎಂದು ಹೇಳಿ ಕಾಗದವನ್ನು ಕೊಟ್ಟನು.

ಯದುನಾರಾಯಣನು ಉತ್ಕಂಠತೆಯಿಂದ ಕಾಗದವನ್ನು ಸಂಪೂರ್ಣ ಓದಿದನು. ದರಬಾರವು ಶಾಂತವು. ಸಭೆಯಲ್ಲಿ ಕೆಲವರ ಮುಖದ ಮೇಲೆ ಉದ್ವೇಗದ ಕಳೆಯೂ, ಕೆಲವರ ಮುಖದ ಮೇಲೆ ಭೀತಿಯ ಚಿಹ್ನವೂ ತೋರುತ್ತಲಿವೆ. ಕೆಲವರು ಕುತೂಹಲ ಪ್ರಿಯರು. ಒಂದು ಕಡೆಗೆ ಸಮಸ್ತ ಮುಸಲ್ಮಾನರು; ಅನ್ಯಪಕ್ಷಕ್ಕೆ ಸಾಮ್ರಾಟನ ಪ್ರತಿನಿಧಿಯಾದ ಯದುನಾರಾಯಣನು ಯದುನಾರಾಯಣನು ಕಾಗದವನ್ನು ಪೂರ್ಣ ಓದಿಕೊಂಡು:—ಸಹೃದಯ ಮುಸಲ್ಮಾನಬಾಂಧವರೇ, ಇಂದಿನ ನಿಮ್ಮ ನಿಷ್ಕಪಟದ ವ್ಯವಹಾರವನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ. ನಮ್ಮ ಮುಖ್ಯ ಉದ್ದೇಶವು ಹಿಂದೂ-ಮುಸಲ್ಮಾನರ ಐಕ್ಯವು. ಅಂದಬಳಿಕ ಅಂತರಂಗದಲ್ಲಿ ಪ್ರಕಟವಾಗಿರುವ ಈ ದ್ವೇಷಾಗ್ನಿಯನ್ನು ಈಗಲೇ ಶಾಂತ ಮಾಡದಿದ್ದರೆ ಅದು ಕ್ಷಣಕ್ಷಣಕ್ಕೆ ಹೊತ್ತುತ್ತ ನಡೆಯುವದು. ಈ ವಿಷಯದಲ್ಲಿ ತ್ಯಾಗವೇ ಸರಳಮಾರ್ಗವೆಂದು ನನ್ನ ಕ್ಷುದ್ರಬುದ್ಧಿಗೆ ತೋರುತ್ತದೆ. ಸ್ವಾರ್ಥತ್ಯಾಗವನ್ನೇ ಮೂಲಮಂತ್ರವನ್ನಾಗಿ ಮಾಡಿಕೊಂಡು ಎಲ್ಲರೂ ವರ್ತಿಸತಕ್ಕದ್ದು. ತಂದೆಯ ಮರಣದ ನಂತರ ಮುಸಲ್ಮಾನ ಸಮಾಜದಲ್ಲಿ ಹುಟ್ಟಿದ ಈ ಭಾವನೆಯ ಸಂಶಯವು ನನಗೆ

ಬಂದಿತ್ತು. ನಾನೂ ಇದರ ಪ್ರತೀಕಾರದ ವಿಷಯವಾಗಿ ಚಿಂತೆ ಮಾಡುತ್ತಿದ್ದೆನು. ಆದಕ್ಕೆ ಯೋಗ್ಯ ಸಮಯವೇ ದೊರೆತಿದ್ದಿಲ್ಲ; ಇಂದು ದೊರೆತಿರುವದು. ಇದಲ್ಲದೆ ಆ ವಿಷಯವನ್ನು ನೀವೇ ತೆಗೆದಿರುವಿರಿ. ನಿಮ್ಮ ಇಚ್ಛೆಯಂತೆ ಈ ಕ್ರಮದ ಕಾರ್ಯವನ್ನು ವಹಿಸಲಿಕ್ಕೆ ಯೋಗ್ಯವಾದ ಮುಸಲ್ಮಾನ ವ್ಯಕ್ತಿಯು ಇಂದು ನಮ್ಮ ಕಣ್ಣೆದುರಿಗೆ ಇರುವನು. ನಾನು ಹೇಳುವ ಆ ಯೋಗ್ಯವ್ಯಕ್ತಿಯನ್ನು ನೀವೆಲ್ಲರೂ ಒಮ್ಮನಸ್ಸಿನಿಂದ ಒಪ್ಪುವಿರೆಂದು ನಂಬುತ್ತೇನೆ.

ಆ ವ್ಯಕ್ತಿಯು ಯಾರೆಂಬ ಕುತೂಹಲವು ಹಿಂದು-ಮುಸಲ್ಮಾನರಿಬ್ಬರಲ್ಲಿಯೂ ಹುಟ್ಟಿ, ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು, ಸ್ವಲ್ಪ ತಡೆದು ಯಮುನಾರಾಯಣನು ಮುಗುಳುನಗೆಯಿಂದ:— "ಬಂಧುಗಳೇ, ನಾನು ಹೇಳಲ್ಪಡುವ ಮಹಾತ್ಮನೆಂದರೆ, ವೀರಾಗ್ರಣಿ ಕಾಸೀಮಖಾನ ಬಹದ್ದೂರನು. ಕಾರ್ಯದಲ್ಲಿಯೂ, ಬುದ್ಧಿಚಾತುರ್ಯದಲ್ಲಿಯೂ ಅದ್ವಿತೀಯನು. ನನ್ನ ತಂದೆಯು ಇರುವಾಗ ಪ್ರತಿಯೊಂದು ಕಾರ್ಯದಲ್ಲಿ ಈ ಖಾನಸಾಹೇಬರ ವಿಚಾರವನ್ನು ಕೇಳಿಕೊಳ್ಳುತ್ತಿದ್ದ ಸಂಗತಿಯು ನಿಮ್ಮೆಲ್ಲರಿಗೂ ವಿದಿತವಿರುವದು. ಕಾರಣ ಎಲ್ಲರೂ ಇದಕ್ಕೆ ಅನುಮೋದನ ಕೊಡಬೇಕಾಗಿ ವಿನಂತಿಯು" ಆಗ ನಾಲ್ಕೂ ದಿಕ್ಕಿನಿಂದ ಖಾನನ ಹೆಸರಿನಿಂದ ಜಯಜಯಕಾರವಾಯಿತು. ಕಾಸೀಮಖಾನನಿಗೆ ಸಂಕೋಚವಾದಂತಾಗಿ ಮುಖವು ಕೆಂಪಡರಿತು. ಹಿಂದೂಜನರ ಮುಖಗಳು ಬಾಡಿದ್ದರಿಂದ ಕೆಳಗೆ ಮೋರೆ ಮಾಡಿಕೊಂಡು ಕುಳಿತರು.

ಯಮುನಾರಾಯಣನು ಎದ್ದು ನಿಂತು ಪುನಃ ಹೇಳತೊಡಗಿದನು:- "ಬಾಂಧವರೇ, ನನ್ನ ಮಾತಿಗೆ ಒಪ್ಪಿಗೆಯನ್ನು ಕೊಟ್ಟಿದ್ದನ್ನು ನೋಡಿ ಸಂತೋಷವಾಯಿತು. ಇದರ ಸಂಗಡ ನೀವು ಇನ್ನೊಂದು ವಿಷಯದ ಬಗ್ಗೆ ವಿಚಾರವನ್ನೇ ಮಾಡಲಿಲ್ಲ. ಅದಾವದೆಂದರೆ, ಯಾರ ತಂದೆಯು ಆಮರಣ ಈ ಸಾಮ್ರಾಜ್ಯದ ಹಿತದ ಸಲುವಾಗಿ ತನು-ಮನ-ಧನಗಳನ್ನು ಸಪಿಸಿ ನಿಸ್ವಾರ್ಥತೆಯಿಂದ ದುಡಿದನೋ, ಅಂಥವನ ಪುತ್ರನಾದ ನಾನು ಏನೂ ಲಾಭವಿಲ್ಲದೆ ಈ ಸಾಮ್ರಾಜ್ಯ ಸಂಬಂಧವನ್ನು ಕಡಿದುಕೊಳ್ಳಬೇಕೇನು? ಮತ್ತು ತಂದೆಯಿಂದ ಆರಂಭವಾದ ಐಕ್ಯಪ್ರತಿಷ್ಠಾಪನೆಯಂಥ ಮಹತ್ಕಾರ್ಯವು ಇಲ್ಲಿಗೇ ಮುಗಿಯತಕ್ಕದ್ದೇ? ಬೇಡ. ನೀವು ಅಷ್ಟು ಹೃದಯಹೀನರಲ್ಲ. ಸಹೋದರರೇ, ನಾನು ಪ್ರತಿನಿಧಿತ್ವವನ್ನು ಬಿಡಲು

ಸಿದ್ಧನಿರುವೆನು; ಆದರೆ ಸಾಮ್ರಾಜ್ಯಸಂಬಂಧವನ್ನು ಬಿಡುವ ಮನಸ್ಸುಳ್ಳವನಲ್ಲ. ಕಾರಣ ನೀವು ನನ್ನ ಮತ್ತು ಖಾನಸಾಹೇಬ-ನನ್ನ ಭಾಯೀ ಸಾಹೇಬರ-ಅಧಿಕಾರಗಳ ಅದಲು-ಬದಲು ಮಾಡುವದಕ್ಕೆ ಒಪ್ಪಿಗೆಯನ್ನು ಕೊಡುವಿರೆಂದು ಆಶಿಸುತ್ತೇನೆ.''

ಒಬ್ಬನ ಮುಖದಿಂದಲೂ ಸಮ್ಮತಿಸೂಚಕ ಶಬ್ದವು ಹೊರಡಲಿಲ್ಲ ದರಬಾರವು ಸ್ತಬ್ಧವು! ಕ್ಷಣಕಾಲ ತಡೆದು, ಯದುನಾರಾಯಣನು:— ಬಂಧುಗಳೇ, 'ಮೌನವು ಸಮ್ಮತಿ' ಎಂದು ಎಲ್ಲ ಕಡೆಗೂ ಭಾವಿಸಿದರೆ ತಪ್ಪಾಗುವದು. ನೀವು ಇದಕ್ಕೆ ಏಕೆ ಸಮ್ಮತಿ ಕೊಡುವದಿಲ್ಲೆಂಬದು ನನಗೆ ತಿಳಿದಿರುವದು. ಇದು ನಿಮ್ಮ ಎರಡನೇ ಅಭಿಯೋಗಕ್ಕೆ ಸಂಬಂಧಿಸಿರುತ್ತದೆ. ಅಂದಬಳಿಕ ಮೊದಲು ಅದರ ನಿರ್ಣಯವನ್ನು ಮಾಡಲಿಕ್ಕೇ ಬೇಕು. ವಂಶಮರ್ಯಾದೆಯೂ, ಜಾತಿಯ ಗೌರವವೂ ಕಡಿಮೆಯಾಗಬಾರದೆಂದು ನಿಮ್ಮ ಅಭಿಪ್ರಾಯವು. ಅದು ಯೋಗ್ಯವೇ; ಆದರೆ ನಾನು ದೇವರನ್ನು ಸ್ಮರಿಸಿ ಸತ್ಯವಾಗಿ ಹೇಳುವದೇನೆಂದರೆ:—''ಶಹಾಜಾದಾ ಅಜೀಮ ಪುತ್ರಿಯ ಮತ್ತು ನನ್ನ ಸಂಬಂಧದ ನಡುವೆ ಇಂದ್ರಿಯ ಲಾಲಸೆಯೂ, ವಿಷಯ ಸುಖಾಪೇಕ್ಷೆಯೂ ಎಳ್ಳಷ್ಟು ಸಹ ಇಲ್ಲ; ಹಾಗು ಅದು ಪ್ರಣಯವಲ್ಲ. ಅದರಲ್ಲಿ ಸೌಂದರ್ಯ, ಮೋಹಕತೆಗಳು ಇಲ್ಲ. ಸಾಮ್ರಾಜ್ಯಾಪೇಕ್ಷೆಯೂ ಇಲ್ಲ; ಮತ್ತು ಈ ವಿಷಯದ ಬಗ್ಗೆ ಸಮರ್ಥಿಸುವ ಮನುಷ್ಯನು ಯುವಕ-ಯುವತಿಯರ ಮಿಲನವೆಂದರೆ ಪ್ರಣಯವೆಂದೇ ಭಾವಿಸಿರಬಹುದು; ಆದರೆ ಇಲ್ಲಿ ಆ ಭಾವನೆಯ ಲೇಶವೂ ಕೂಡ ಇಲ್ಲ. ಅಜೀಮಸಾಹೇಬರ ಮರಣಕಾಲದ ಸಂದೇಶದ ಪ್ರಕಾರ ಅವನ ಸಮಾಧಿ ಸನ್ನಿಧಿಯಲ್ಲಿ ಪಿತೃಶೋಕಸಂತಪ್ತಳಾದ ಅವನ ಪುತ್ರಿಯ ಸಾಂಭಿಜವು ಈ ಮಿಲನದ ಉದ್ದೇಶವು; ಹಿಂದೂ-ಮುಸಲ್ಮಾನರ ಐಕ್ಯವು; ಮತ್ತು ಐಕ್ಯದ ಪ್ರತಿಷ್ಠೆಗೆ ಸಹಾಯವು.'' ಇದನ್ನು ಕೇಳಿ ಕೂಡಿದ ಸಭಿಕರ ಮನಸ್ಸು ಚಂಚಲವಾದವು. ಯದುನಾರಾಯಣನು ಮತ್ತೆ ಹೇಳತೊಡಗಿದನು:—ಸಭ್ಯರೇ, ಅಸದೃಶವಾದ ಈ ಮಿಲನವು ವಿಚಿತ್ರವಾಗಿ ಕಾಣುವದಲ್ಲವೆ? ಜಗತ್ತಿನಲ್ಲಿಯ ಎಲ್ಲ ಮಹತ್ಕಾರ್ಯಗಳ ಆರಂಭವು ಮೊದಲಿಗೆ ವಿಪರೀತವೇ ಕಾಣುವದು. ಹಜರತ್ ಮಹಮ್ಮದರ ಉಪದೇಶವು ಆರಂಭದಲ್ಲಿ ಜನರಿಗೆ ವಿಪರೀತವೆನಿಸಲಿಲ್ಲವೆ? ಯೇಸುಕ್ರಿಸ್ತನಂಥ

ಧರ್ಮಪ್ರಚಾರವು ವಿಪರೀತವೆನಿಸಿ ಅದು ಅವನ ಜೀವಕ್ಕೆ ಗಂಡಾಂತರವನ್ನು ತಂದಿತು. ಅಂತೂ ಯಾವದೇ ಧರ್ಮಪ್ರಚಾರವಾಗಲಿ, ಸಮಾಜದ ಘಟನವಾಗಲಿ ಪುನರ್ಘಟಿತವಾಗಬೇಕಾದರೆ, ವಿಚಿತ್ರ ವ್ಯಾಪಾರವು ಬೇಕೇ ಬೇಕು; ಅದರಂತೆ ಅಜೀಮು ಕನ್ಯೆಯಾದ ಅಕಮಾನಳ ಪಾಣಿಗ್ರಹಣವು ಎಲ್ಲರಿಗೂ ಅಪೂರ್ವವೆನಿಸುವದು ಸ್ವಾಭಾವಿಕವೇ; ಇದರ ಹೊರ್ತು ಅನ್ಯ ಉಪಾಯವಿಲ್ಲ. ನಾನು ಈ ವಿಷಯದಲ್ಲಿ ಧರ್ಮದಿಂದ ಏನಾದರೂ ಯುಕ್ತಿಮಾರ್ಗವಿದ್ದರೆ ಹೇಳಿರೆಂದು ಹಿಂದೂ ಸಮಾಜದವರಿಗೆ ಪ್ರಾರ್ಥಿಸಿದೆನು; ಆದರೆ ರಕ್ಷಣವೇ ಶೀಲವುಳ್ಳ ಆ ಸಮಾಜವು ಇದಕ್ಕೆ ವ್ಯಭಿಚಾರವೆಂದು ಅಂದಿತು. ಮುಸಲ್ಮಾನರನ್ನು ಶುದ್ಧಿಗೊಳಿಸಿ ಬ್ರಾಹ್ಮಣಧರ್ಮದಲ್ಲಿ ತೆಗೆದುಕೊಳ್ಳಲು ಬರುವದಿಲ್ಲವಂತೆ! ಮತ್ತು ಯುಗಯುಗಾಂತರದಿಂದ ನಡೆದು ಬಂದ ರೂಢಿಯಲ್ಲಿ ಹೆಚ್ಚು-ಕಡಿಮೆ ಮಾಡುವ ಅಧಿಕಾರವೂ ಇಲ್ಲವಂತೆ!! ಅಂತಃಕರಣಪೂರ್ವಕವಾಗಿ ಬರುವವರನ್ನು ಎಲ್ಲ ಧರ್ಮಗಳೂ ಪ್ರೀತಿಯಿಂದ ಸ್ವಾಗತ ಮಾಡುವವು; ಆದರೆ ಹಿಂದೂಸಮಾಜದವರು ಈ ವಿಷಯದಲ್ಲಿ ಸಂಕುಚಿತ ದೃಷ್ಟಿಯನ್ನಿಟ್ಟಿರುವರು. ಇದರ ಉಪಯೋಗವನ್ನು ಅನ್ಯಧರ್ಮದವರು ಮಾಡಿಕೊಂಡು ನಯ-ಭಯಗಳಿಂದ ಹಿಂದೂಧರ್ಮವನ್ನು ರಸಾತಳಕ್ಕೆ ಹಿತ್ತಲು ಪ್ರಯತ್ನಿಸಿದರೂ ಸಹ ಅವರಲ್ಲಿ ಜಾಗ್ರತಿಯಿಲ್ಲ. ಇಷ್ಟು ಮಾತಾಡಿ ಕ್ಷಣಹೊತ್ತು ನಿಂತು:—"ಅಂದಬಳಿಕ ಮಾಡುವದೇನು! ಯಾವ ಧರ್ಮವು ನಮ್ಮ ಮಿಲನದ ಕಾರ್ಯಕ್ಕೆ ಸಹಾಯ ಮಾಡುವದೋ, ಆ ಧರ್ಮಾಂತರದ ಹೊರ್ತು ಅನ್ಯ ಉಪಾಯವಿಲ್ಲ. ಮುಸಲ್ಮಾನ ಸಹೋದರರೇ, ಪವಿತ್ರವಾದ ಹಿಂದೂಧರ್ಮದಲ್ಲಿ ಆದರಲ್ಲಿಯೂ ಬ್ರಾಹ್ಮಣ ವಂಶದಲ್ಲಿ ಹುಟ್ಟಿದ ನಾನು, ಸಾಮ್ಯಪ್ರತಿಷ್ಠೆಗೋಸ್ಕರ ನಿಮ್ಮ ಧರ್ಮದ ಆಶ್ರಯ ಭಿಕ್ಷೆಯನ್ನು ಬೇಡುತ್ತೇನೆ ಸ್ವ-ಸಮಾಜದಿಂದ ತಿರಸ್ಕರಿಸಲ್ಪಟ್ಟ ಈ ದೀನ ವ್ಯಕ್ತಿಯನ್ನು ನೀವು ನಿಮ್ಮ ಸಮಾಜದಲ್ಲಿ ಸ್ವೀಕರಿಸುವಿರೆಂದು ನಂಬಿರುವೆನು." ಇಷ್ಟು ಹೇಳಿ ಯದುನಾರಾಯಣನು ತಲೆ ಬೊಗ್ಗಿಸಿಕೊಂಡು ನಿಂತನು ಎಲ್ಲರೂ ಈ ವಿಚಿತ್ರ ವರ್ತನದಿಂದ ಅವನ ಮುಖವನ್ನೇ ನೋಡಹತ್ತಿದರು

ಕಾಶೀಮುಖಾನನಿಂದ ಬಹಳಹೊತ್ತು ಸುಮ್ಮನೆ ಕೂಡುವದಾಗಲಿಲ್ಲ. ಯದುನಾರಾಯಣನ ಪಾಂಡಿತ್ಯಪೂರ್ಣ ವಿಚಾರ ಸರಣಿಯೂ, ಅಭೂತ

ಪೂರ್ವ ಸ್ವಾರ್ಥತ್ಯಾಗವೂ, ಕರ್ತವ್ಯಕರ್ಮದಲ್ಲಿಯ ನಿಷ್ಕಪಟ ಆಸ್ಥೆಯೂ ಖಾನನ ಹೃದಯುವನ್ನು ಸಂಪೂರ್ಣವಾಗಿ ಆಕರ್ಷಿಸಿಕೊಂಡವು ಅವನ ಹೃದಯುದಲ್ಲಿಯ ಉದಾರಭಾವನೆಯು ಚೇತನವನ್ನು ಜಾಗೃತಗೊಳಿಸಿತು. ಅವನು ಎದ್ದು ನಿಂತು ಉತ್ಸಾಹದಿಂದ:—"ಇಸ್ಲಾಮೀಧರ್ಮದ ಮುಂದಾಳುಗಳೇ, ಇನ್ನೂ ಮೌನವನ್ನು ಧರಿಸಿರುವಿರಾ? ಪರಮ ಕಾರುಣ್ಯನಿಧಿಯಾದ ಖುದಾನ ಆಶೀರ್ವಾದದಿಂದ, ನಮ್ಮ ಸನಾತನಧರ್ಮದ ಉದಾರತನದಿಂದ, ಇಂದಿನ ದಿವಸ ಪರಧರ್ಮದ ಒಬ್ಬ ವೀರಮನುಷ್ಯನು ಅತಿಥಿಯಾಗಿ ನಮ್ಮ ಧರ್ಮವೆಂಬ ಮನೆಯ ಬಾಗಿಲ ಮುಂದೆ ನಿಂತು ಆಶ್ರಯ ಬೇಡುತ್ತಿರಲು, ಬಾಗಿಲು ತೆರೆದು ಅವನನ್ನು ಒಳಗೆ ಕರೆದುಕೊಳ್ಳುವ ಬುದ್ಧಿಯು ಇನ್ನೂ ನಮ್ಮಲ್ಲಿ ಹುಟ್ಟದೇ! ಕುಮಾರ, ಇಂದಿಗೆ ನಮ್ಮೆಲ್ಲರ ಆವೇದನೆ-ಅಭಿಯೋಗಗಳು ಹಾಳಾಗಿ ಹೋದವು. ಜನರ ಮಾತಿನಿಂದ ನಾನೂ ಆಕ್ಷೇಪಿಸಿದೆನು ನಿನ್ನ ಉದಾರ ಮನಸ್ಸಿನ ಕಲ್ಪನೆಯು ಆಗದ್ದಕ್ಕೆ ನನಗೆ ಬಹಳ ಪಶ್ಚಾತ್ತಾಪವಾಗಿದೆ. ಇಂದು ನನ್ನ ಸಂಶಯುವು ದೂರವಾಯಿತು. ನಿನ್ನ ಸಮಾನ ಯೋಗ್ಯತೆಯುಳ್ಳವರು ಇಲ್ಲಿ ಯಾರಿರುವರು? ನಾನು ಯಾವಾಗಲೂ ನಿನ್ನ ಆಶ್ರಯುದ ಕೆಳಗೇ ಇರುತ್ತೇನೆ; ಮತ್ತು ಎಲೈ ಮುಸಲ್ಮಾನ ಬಂಧುಗಳೇ, ಕುಮಾರನು ಮುಸಲ್ಮಾನ ಧರ್ಮವನ್ನು ಸ್ವೀಕಾರ ಮಾಡಲಿಕ್ಕೆ ಸಿದ್ಧನಾಗಿರುವನು; ಅಂದಬಳಿಕ ಶಹಾಜಾದಿ-ಅಶಮಾನಳ ವಿವಾಹವು ಮುಸಲ್ಮಾನೀ ಧರ್ಮದಂತೆ ಆಗಲಿ; ಇನ್ನು ಮುಂದೆ ಸಾಮ್ರಾಟನ ಆಸನವು ಶೂನ್ಯವೇಕೆ?" ಎಂದನು.

ಎಲ್ಲ ಮುಸಲ್ಮಾನರೂ ಚಪ್ಪಾಳೆಯನ್ನು ಕೊಟ್ಟು ಭಾವೀ ಸಾಮ್ರಾಟನ ಹೆಸರಿನಿಂದ ಜಯ ಜಯಕಾರ ಮಾಡಿದರು. ಹಿಂದೂಜನರು ಮಾತ್ರ ವಿಷಣ್ಣಚಿತ್ತದಿಂದ ತಲೆ ಬೊಗ್ಗಿಸಿಕೊಂಡು ಕುಳಿತರು. ಯದುನಾರಾಯಣನ ಲಕ್ಷ್ಯವು ಆ ಕಡೆಗೇ ಇತ್ತು. ಅವನು ಎದ್ದು ನಿಂತು:—"ಹಿಂದೂಬಾಂಧವರೇ, ನನ್ನ ಈ ಕೃತಿಯಿಂದ ತಮ್ಮೆಲ್ಲರ ಮನಸ್ಸು ನೊಂದಿರುವದೆಂಬದು ನನಗೆ ತಿಳಿದಿರುವದು. ಪವಿತ್ರ ಬ್ರಾಹ್ಮಣ ವಂಶದಲ್ಲಿ ಹುಟ್ಟಿ, ತ್ರಿಪುರಾದೇವಿಯಂಥ ಸಾಧ್ವಿಯ ಸ್ತನಪಾನ ಮಾಡಿ, ಹಿಂದೂಕುಲತಿಲಕನಾದಂಥ ಅವನೀನಾಥನ ಪುತ್ರಿಯನ್ನು ಲಗ್ನಮಾಡಿಕೊಂಡು ಮುಸಲ್ಮಾನ ಧರ್ಮವನ್ನು ಸ್ವೀಕಾರ ಮಾಡಲು ಕಾರಣವೇನು? ಭಾದುಡೀರಾಜ್ಯದ

ಸಂಪತ್ತು-ಗೌರವಗಳು ಕಡಿಮೆಯುವಲ್ಲ; ಆದರೆ ಕೇವಲ ಸಾಮ್ರಾಜ್ಯದ ಪ್ರತಿಷ್ಠೆಗಾಗಿ ಈ ಪ್ರಕಾರ ಸ್ವಾರ್ಥತ್ಯಾಗ ಮಾಡಬೇಕಾಗಿದೆ. ನಾನು ಮುಸಲ್ಮಾನ ಧರ್ಮವನ್ನು ಸ್ವೀಕರಿಸಿದ ಮಾತ್ರಕ್ಕೆ ಹಿಂದೂಧರ್ಮಕ್ಕೆ ವಿರೋಧಿಯಾಗುವೆನೆಂಬ ಭಾವನೆಯುನ್ನು ಮಾತ್ರ ಮಾಡಬೇಡಿರಿ. ನನ್ನ ಪತ್ನೀ-ಪುತ್ರರೂ, ಮಾತಾ ಪಿತೃಗಳೂ ಹಿಂದುಗಳು; ಹೀಗಿದ್ದು ನಾನು ನಂದನವನವನ್ನು ತ್ಯಾಗ ಮಾಡಿ, ನರಕದಲ್ಲಿ ಕ್ರೀಡಿಸಲು ಮುಂದರಿದಿರುವೆನೆಂದು ಭಾವಿಸಬೇಡಿರಿ. ನಾನು ಕಠೋರನಾದರೂ ಹೃದಯಹೀನನಲ್ಲ. ಸ್ವಜಾತಿಯನ್ನು ತ್ಯಾಗ ಮಾಡಿದ್ದರೂ ಸ್ವಧರ್ಮದ್ರೋಹಿಯಲ್ಲ. ಸಮಾಜ ಭಿನ್ನವಾದರೂ ಧರ್ಮವು ಒಂದೇ. ಅನುಷ್ಠಾನವು ಬೇರೆಯಾಗಿದ್ದರೂ ಧ್ಯೇ-ಯವು ಒಂದೇ. ಬಾಂಧವರೇ, ವಿಚಲಿತರಾಗಬೇಡಿರಿ. ನನಗೆ ಹಿಂದುಗಳು ಬಾಂಧವರು; ಮುಸಲ್ಮಾನರೂ ಬಂಧುಗಳು. ಎಲ್ಲರೂ ಅಷ್ಟೇ" ಹೀಗೆ ಮಾತನಾಡುತ್ತ ಆತ್ಮಸುಖ ತಲ್ಲೀನನಾಗಿ ಮೈಮರೆತು ಆಕಾಶದ ಕಡೆಗೆ ಮುಖವೆತ್ತಿ ಕೈಮುಗಿದುಕೊಂಡು ನಿಂತನು. ಕಣ್ಣೀರು ತಾವೇ ತಾವಾಗಿ ಹೋಗಹತ್ತಿದವು ಸಭೆಯೊಳಗಿನ ಎಲ್ಲ ಜನರೂ ಕ್ಷಣಕಾಲ ಈ ಜಡ ಸೃಷ್ಟಿಯ ಭೇದಾಭೇದಗಳನ್ನು ಮರೆತು ತದೇಕಧ್ಯಾನ ಮಗ್ನರಾದರು. ಧನ್ಯ! ಯದುನಾರಾಯಣ, ನೀನೇ ಧನ್ಯನು!!

---

೨

ಜಗತ್ತಿನಲ್ಲಿ ವಿಚಾರ ಮಾಡಿ ಕಾರ್ಯ ಮಾಡುವವರಿಗಿಂತ ಕಾರ್ಯ ಮಾಡಿ ವಿಚಾರ ಮಾಡುವವರೇ ಬಹಳ ಒಮ್ಮೊಮ್ಮೆ ವಿಚಾರ ಮಾಡಲಿಕ್ಕೆ ಆಸ್ಪದ ಸಿಗದೆ ಮೊದಲು ಕಾರ್ಯವನ್ನು ಮಾಡಬೇಕಾಗುತ್ತದೆ. ಆಗ ಮನುಷ್ಯನು ಪ್ರತ್ಯುತ್ಪನ್ನಮತಿಯಂತೆ ಕಾರ್ಯವನ್ನು ಮಾಡುವನು. ಆದರಿಂದ ಫಲವು ಸಿಗಬಹುದು; ಅಥವಾ ಸಿಗಲಿಕ್ಕಿಲ್ಲ. ಆಗ ಮಾತ್ರ ಮಾನವನು ನಾನು ಹಾಗೆ ಮಾಡಿದ್ದರೆ ಹೀಗಾಗುತ್ತಿದ್ದಿಲ್ಲ; ಹೀಗೆ ಮಾಡಿದ್ದರೆ ಹಾಗಾಗುತ್ತಿದ್ದಿಲ್ಲ ನಾನು ಮಾಡಿದ್ದೇ ಯೋಗ್ಯವು ಎಂದು ಮೊದಲಾಗಿ ನಾನಾ ತರ್ಕವಿತರ್ಕಗಳನ್ನು ಮಾಡುವನು.

ಕಾಸೀಮುಖಾನನಿಗೆ ಅಂದಿನ ದರಬಾರದಲ್ಲಿ ವಿಚಾರಕ್ಕೆ ಆಸ್ಪದವೇ ದೊರೆಯಲಿಲ್ಲ. ಯದುನಾರಾಯಣನು ಮುಸಲ್ಮಾನನಾಗುವನೆಂಬ ಭಾವ

ನೆಯು ಸ್ವಪ್ನದಲ್ಲಿ ಸಹ ಅಸಂಭವವು. ಅಂದಿನ ದರಬಾರದಲ್ಲಿಯ ವಿಚಿತ್ರ ವ್ಯಾಪಾರದಿಂದ ಅವನ ಉದಾರಭಾವನೆಯು ಉದ್ರೇಕವಾಗಿ ಆ ಭರದಲ್ಲಿ ತನ್ನ ಮುಂದೆ ಕೈ ಕಟ್ಟಿಕೊಂಡು ನಿಂತ ಸಾಮ್ರಾಟನ ಪ್ರತಿನಿಧಿತ್ವವನ್ನು ಯದುನಾರಾಯಣನಿಗೇ ಕೊಟ್ಟನು. ಯದುನಾರಾಯಣನ "ಭಾಯೀ ಸಾಹೇಬ" ಎಂಬ ಸಂಬೋಧನವು ಯದುನಾರಾಯಣನಲ್ಲಿ ಇದ್ದ ಅವನ ಶ್ರದ್ಧೆಯನ್ನು ದ್ವಿಗುಣಿಕಗೊಳಿಸಿತು. ಅವನು ಮನೆಗೆ ಬಂದ ಮೇಲೆ ತಾನು ಮಾಡಿದ ಕಾರ್ಯವನ್ನು ರಾಜನೀತಿಯ ಒರೆಗಲ್ಲಿಗೆ ಹಚ್ಚಿ ನೋಡಹತ್ತಿದನು. ಪ್ರತಿನಿಧಿಯ ಪದವು ಗೌರವಯುಕ್ತವಾದರೂ ಸೇನಾಪತಿಯ ಕೈಯಲ್ಲಿಯೇ ಸಾಮ್ರಾಜ್ಯದ ಶಕ್ತಿಯು ಇರುವ ಕಾರಣ, ಅದನ್ನು ಕುಶಲನಾದ ಯದುನಾರಾಯಣನ ಕೈಯಲ್ಲಿ ಕೊಟ್ಟಿದ್ದರೆ ಅವನು ಸಮಸ್ತ ಭಾರತವನ್ನು ಕೈವಶಮಾಡಿಕೊಳ್ಳಬಹುದಾಗಿತ್ತು. ಅಂದಬಳಿಕ ತಾನು ಮಾಡಿದ್ದೇ ವಿಹಿತವೆಂದು ಸಮಾಧಾನ ಮಾಡಿಕೊಳ್ಳಹತ್ತಿದನು.

ಇದೆಲ್ಲ ನಿಜವು; ಆದರೆ ನನ್ನ ಇಚ್ಛಿತವು ಮನೋರಾಜ್ಯದಂತೆ ಕ್ಷಣದಲ್ಲಿ ಭಸ್ಮವಾಯಿತಲ್ಲ? ಅಹಹಾ! ಶಹಾಜಾದಿಯನ್ನು ಮರೆಯುವ ಬಗೆ ಹೇಗೆ? ಅವಳ ಸುಂದರ ಮುಖಕಮಲವು ಕಣ್ಣೆದುರಿಗೆ ಕಟ್ಟಿದಂತಾಗಿದೆ. ಈ ಕಾಶೀಮನು ಧೈರ್ಯವಾನನೆಂತೇ ಈ ನಿರಾಶಾಗ್ನಿಯನ್ನು ಸಹಿಸಿರುವನು. ಹಾಯ್! ದುರ್ಭಾಗ್ಯ ಕಾಶೀಮಖಾನ; ನೀನು ಎಂಥ ದೃಢ ಆಶಾಬದ್ಧನಾಗಿ ಹೃದಯದಲ್ಲಿ ಪ್ರೇಮಸಂಚಯ ಮಾಡಿಕೊಂಡು ಹೋ-ಗಿದ್ದೆಯಲ್ಲ? ಅದನ್ನೆಲ್ಲ ಆಶಮಾನಳು ಒಂದೇ ಶಬ್ದದಿಂದ ಭಂಗಮಾಡಿದಳು. ಅವಳ ಆ ಸವಿ ಮಾತು, ವಿನಯ, ವರ್ತನಗಳೆಲ್ಲವು ಮೋಸದವಾಗಿದ್ದವಲ್ಲವೆ? ಅವಳು ನನ್ನ ಶುಶ್ರೂಷೆಯನ್ನು ಎಷ್ಟು ಮನಃಪೂರ್ವಕವಾಗಿ ಮಾಡಿದಳಲ್ಲ? ಸುಂದರಿಯರ ಸೌಂದರ್ಯದಲ್ಲಿ ಹೃದಯದ ಗುಟ್ಟು ಸ್ವಲ್ಪ ಸಹ ಇರಬಾರದೇ? ಅವರ ಸುಂದರ ಮೋಹಕವು ಗರ್ವ ಕಪಟಗಳಿಂದ ವಿರಾಜಮಾನವೇ? ರೂಪವು ದೇವರ ಪ್ರಸಾದವಿದ್ದಂತೆ, ಗುಣವೂ ಅವನ ಪ್ರಸಾದವೇ! ಆದರೆ ಮಾಡುವದೇನು? ಬಹು ಮನೋಹರವಾದ ಗುಲಾಬಿ ಪುಷ್ಪವು ಕಂಟಕ ಮಧ್ಯದಲ್ಲಿ ಇರುವದು ಸ್ವಾಭಾವಿಕವೇ ಸರಿ.

ಆದರೆ ಆಶಮಾನಳು ಯದುನಾರಾಯಣನಲ್ಲಿ ಅನುರಕ್ತಳಾದ ಕಾರಣವೇನಿರಬಹುದು? ಅವನು ವೀರನು ಚತುರನು. ರೂಪವಂತನು.

ಪ್ರೇಮಿಯು; ಆದರೂ ಅವನ ಪ್ರೇಮಕ್ಕೆ ಬೆಲೆ ಬರುವದೇ? ಯಾಕಂದರೆ ಅವನು ವಿವಾಹಿತನು; ಮಗನ ತಂದೆಯು. ಅವನ ಹೃದಯದಲ್ಲಿ ಅತ ಮಾನಳಿಗೆ ಸ್ಥಳವೆಲ್ಲಿ ದೊರೆಯಬೇಕು? ಆಗಲಿ ಅತಮಾನ್, ಒಂದು ದಿವಸ ನಿನಗೆ ಇದರ ಪಶ್ಚಾತ್ತಾಪವಾಗಲೇಬೇಕು ನೀನು ಇದೇ ಕಾಶೀಮಖಾನ ನಿಗೆ ಶರಣು ಬಂದೇ ಬರುವಿ ಅದೂ ದೂರವಿಲ್ಲ. ಯಾಕಂದರೆ ಯದು ನಾರಾಯಣನ ಧರ್ಮಾಂತರವು ಒಂದು ಬಗೆಯಿಂದ ರಾಜನೈತಿಕ ಫಲವು. ಅದರಲ್ಲಿ ಆತ್ಮಸಂತೃಪ್ತಿಯು ಅಗೋಚರವಾಗಿ ಅಡಕವಾಗಿರುವದು

ಹಿಂದೂಜನರು ವಿದ್ಯೆಯಲ್ಲಿ, ಬುದ್ಧಿಯಲ್ಲಿ, ರಣಪಾಂಡಿತ್ಯದಲ್ಲಿ ಅದ್ವಿತೀಯರು ಅಂದಬಳಿಕ ಅವರು ಸುಮ್ಮನೆ ಯಾಕೆ ಕೂತಾರು? ಬಲದಿಂದ, ಛಲದಿಂದ, ಕೌಶಲ್ಯದಿಂದ ಕಳೆದುಕೊಂಡ ಸ್ವರಾಜ್ಯವನ್ನು ಸಂಪಾದಿಸುವದು ಸಹಜವು; ಆದರೆ ಅವರು ಸರ್ವಸ್ವವನ್ನು ಅಪಹರಿಸಿದ ನಮ್ಮ ಸಂಗಡ ಇಷ್ಟು ಉದಾರತನದಿಂದ ಸಖ್ಯ-ಸೂತ್ರಗಳನ್ನು ಬೆಳಿಸಲು ಪ್ರಯತ್ನ ಮಾಡುವದು ನಿಜವೋ?-ಮೋಸವೋ? ಯದುನಾರಾಯಣನ ಈ ಕೃತಿಯು ಮುಸಲ್ಮಾನ ಸಮಾಜವನ್ನು ಮೋಹಾಂಧಗೊಳಿಸಿ, ಹಿಂದುಗಳ ಕರತಲಾ ಮಲಕ ಮಾಡಿಕೊಂಡು ನಿರ್ವೀರ್ಯವನ್ನಾಗಿ ಮಾಡುವದರ ಸಲುವಾಗಿ ಇದ್ದರೂ ಇರಬಹುದು; ಆದರೆ ಇವನು ಛದ್ಮವೇಷದಿಂದ ಆತ್ಮಗೋಪನ ವನ್ನು ಎಷ್ಟು ದಿವಸ ಮಾಡಿಕೊಳ್ಳುವನು?

ಕಾಶೀಮನು ಮತ್ತೆ ಮನಸ್ಸಿನಲ್ಲಿ:ಯದುನಾರಾಯಣನ ಔದಾರ್ಯ ಮಂಡಿತ ಮುಖವನ್ನು ನೋಡಿದರೆ ಕಪಟದ ಗಂಧವು ಕೂಡ ತೋರುವದಿಲ್ಲ ಅಂದಿನ ಆತ್ಮನಿವೇದನವು ಸರಳ ಮನಸ್ಸಿನ ಸಾಕ್ಷಿಯು; ಆದರೆ ಯದುನಾರಾಯಣನ ಈ ವರ್ತನವನ್ನು ಹಿಂದುಗಳು ಸುಮ್ಮನೆ ಸಹಿಸ ಬಹುದೇನು? ಎಂದಿಗೂ ಸಹಿಸರು ಒಂದುವೇಳೆ ಸಹನ ಮಾಡಿದ್ದಾದರೆ, ಹಿಂದೂ ಜಾತಿಯು ಮೃತವಾಯಿತೆಂದೇ ತಿಳಿಯಬೇಕು.

ಕಾಶೀಮ! ನೀನು ಭಗ್ನಮನೋರಥನಾದರೂ ಅತಮಾನಳ ಮೇಲಿನ ವ್ಯಾಮೋಹವು ಕಡಿಮೆಯಾಗಬಾರದೇನು? ಶಕ್ಯವಿಲ್ಲ! ಅವಳು ಎಲ್ಲಿದ್ದರೂ ಅವಳ ಹಿತಾಕಾಂಕ್ಷಿಯಾಗಿ ಇರು; ಆದರೆ ಅವಳ ನೋಡು........ ದೇವರ ದಯೆಯಿಂದ ಅವಳಿಗೆ ಅಂಥ ಪ್ರಸಂಗ ಬಂದರೆ ಅವಳಿಗೆ ಪಶ್ಚಾತ್ತಾಪವಾಗುವಂತೆ ಮಾಡಿ, ನಿನ್ನ ಉದಾರಹೃದಯದ ಕಲ್ಪನೆಯನ್ನು ಅವ

ಳಿಗೆ ಮಾಡಿಕೊಡು; ಇದೆಲ್ಲ ಹಿಂದುಗಳ ಕಪಟಕಾರಸ್ಥಾನವಿದ್ದರೆ ಸ್ವಲ್ಪ ಹೊತ್ತು ಚಿಂತಿಸಿ—"ಕಿಯಾಮತ್" ಎಂದು ಒದರಿದನು.

ಹೊರಗಿನಿಂದ:—ಹುಜೂರ! ಖುದಾವಂದ!! ಅಪ್ಪಣೆ.

ಕಾಶೀಮ:—ಸೇನಾಪತೀ ಮುನೀಮಖಾನನನ್ನು ಕರೆ.

ಕಿಯಾಮತ್:—"ಅಪ್ಪಣೆ" ಎಂದು ಹೋಗುವನು.

ಸ್ವಲ್ಪ ಹೊತ್ತಿನಲ್ಲಿ ಮುನೀಮಖಾನನು ಬಂದನು. ಅವರಿಬ್ಬರ ನಡುವೆ ಬಹಳ ಹೊತ್ತಿನ ವರೆಗೆ ಮಾತು-ಕಥೆಗಳು ನಡೆದವು. ಸದ್ಯದ ಪರಿಸ್ಥಿತಿಯನ್ನು ಕಾಶೀಮನು ಮುನೀಮನಿಗೆ ತಿಳಿಸಿ, ದೂರದೃಷ್ಟಿಯಿಂದ ಹಿಂದೂ ಸೈನಿಕರ ಗತಿವಿಧಿಯನ್ನು ನಿರೀಕ್ಷಿಸಲು ಹೇಳಿದನು; ಮತ್ತು ಶಸ್ತ್ರಾಗಾರದಲ್ಲಿ ಚತುರ ಮುಸಲ್ಮಾನ ಅಧಿಕಾರಿಗಳನ್ನೇ ನಿಯಮಿಸುವಂತೆ ಹೇಳಿದನು. ಈ ಎಲ್ಲ ಕಾರ್ಯಗಳು ಹಿಂದೂ ಸೈನಿಕರಿಗೆ ಸಂಶಯ ಬರದಂತೆ ಮಾಡಲು ಆಜ್ಞಾಪಿಸಿದನು

ಇಷ್ಟು ಸಾವಧಾನತೆ ತೆಗೆದುಕೊಳ್ಳುವದರ ಉದ್ದೇಶವೇನಿರಬಹುದು? ಕಾಶೀಮಖಾನನು ವಿದ್ರೋಹಿಯಾಗುವ ಸುಯೋಗವನ್ನು ಅಪೇಕ್ಷಿಸುತ್ತಿರಬಹುದೇನು?

———

೮

ಇಂದು ಭಾದುಡಿ ಕೋಟೆಯಲ್ಲಿ ರಾಣಿಯ ದರಬಾರವು. ತ್ರಿಪುರಾದೇವಿಯು ಸ್ವತಃ ಸಭೆಗೆ ಬರತಕ್ಕವಳು [illegible] ಯಣನಾರಾಯಣನು ಮುಸಲ್ಮಾನ ಧರ್ಮ ಸ್ವೀಕರಿಸಿ ಗೌಡ[illegible]ಸನಕ್ಕೆ ಏರಿತಿರುವನು ಹಿಂದೂ ಜನರ ಗೌರವವು ಮತ್ತು [illegible] ಪ[illegible]ವು ಅದಕ್ಕೆ ಈಗಿನಿಂದಲೇ ಪ್ರತೀಕಾರ ಮಾಡತಕ್ಕದ್ದು; [illegible] ಹಿಂದುಗಳ ಹಿಂದುತ್ವವು ರಕ್ಷಣೆಯಾಗುವದು.

ನಗರದೊಳಗಿನ ಆಬಾಲವೃದ್ಧರೆಲ್ಲರೂ ಸಭೆಗೆ ಬಂದಿದ್ದರು. ಸಮಸ್ತ ಹಿಂದೂ-ಮುಸಲ್ಮಾನರ ಮೇಲೆ ಮಕ್ಕಳಂತೆ ಮಮತೆ ಮಾಡುವ ತ್ರಿಪುರಾದೇವಿಯು ಈ ಪ್ರಸಂಗದಲ್ಲಿ ಮನಸ್ತಾಪದಿಂದ ತನ್ನ ಮನೋಗತವನ್ನು ಏನು ಅರಹುವಳೆಂಬ ಕುತೂಹಲವು ಎಲ್ಲರಲ್ಲಿಯೂ ಇತ್ತು. ದರಬಾರದಲ್ಲಿ ಗಣೇಶನಾರಾಯಣನ ಸಿಂಹಾಸನವು ಶೂನ್ಯವು. ಅದರ ಮುಂದೆ

ಮೂರು ನೂತನ ಆಸನಗಳು ಮಂಡಿಸಿದ್ದವು. ಒಂದು ತ್ರಿಪುರಾರಾಣಿಗೆ, ಉಳಿದವೆರಡು ಅವನೀನಾಥ ಕಾಲೀಕಿಶೋರಭಟ್ಟರಿಗೆ. ಯೋಗ್ಯವೇಳೆಗೆ ರಾಣಿಯು ಸಭೆಗೆ ಬಂದಳು. ಅವಳ ಮುಖವು ಮ್ಲಾನವಾಗಿದ್ದರೂ ತೇಜೋಹೀನವಾಗಿದ್ದಿಲ್ಲ. ರಾಣಿಯು ಬಂದ ಕೂಡಲೆ ಎಲ್ಲರೂ ಎದ್ದು, ಯಥಾಪ್ರಕಾರ ಅಭಿವಾದನಗಳನ್ನು ಮಾಡಿದರು. ನಂತರ ಕಾಲೀಕಿಶೋರ ಭಟ್ಟಾಚಾರ್ಯರು ಎದ್ದು ನಿಂತು: ಎಲೈ ಸಭಿಕರೇ, ಇಂದಿನ ಆಲೋಚನಾ ವಿಷಯವು ಮಹತ್ವವಾದದ್ದೆಂದೇ ರಾಣಿಯು ದರಬಾರಕ್ಕೆ ಬಂದಿರುವಳು. ಗಣೇಶನಾರಾಯಣ ಮಹಾರಾಜರು ಎಷ್ಟೋ ಪ್ರಸಂಗಗಳಲ್ಲಿ ರಾಣಿಯವರ ಸಲಹೆಯನ್ನು ತಕ್ಕೊಳ್ಳುತ್ತಿದ್ದ ಸಂಗತಿಯು ಎಲ್ಲರಿಗೂ ವಿದಿತವಿರುವದು. ಇವರ ಮಹಾರಥಿ ಪುತ್ರನು ಮುಸಲ್ಮಾನ ಧರ್ಮ ಸ್ವೀಕರಿಸದಿದ್ದರೆ ಇವರಿಗೆ ಈ ಪ್ರಸಂಗ ಬರುತ್ತಿದ್ದಿಲ್ಲ. ನಮ್ಮ ಭಾವೀ ರಾಜನು ಧರ್ಮದ್ರೋಹಿ. ಯದುನಾರಾಯಣನು..........ಮುಸಲ್ಮಾನ ಯದುನಾರಾಯಣನು............... ...

ಅವನೀನಾಥನು ನಡುವೇ ಎದ್ದು ನಿಂತು ಜಡಸ್ವರದಿಂದ:--"ಭಟ್ಟಾಚಾರ್ಯರೇ, ಆ ಪವಿತ್ರ ಹೆಸರು ಇನ್ನೇಕೆ? ಗೌಡಬಾದಶಹ 'ಜಲಾಲುದ್ದೀನ'ಎಂದು ಅನ್ನಿರಿ. ಅವನೀನಾಥರಾಜನ ಕುಲಗರ್ವವನ್ನು ನಾಶಪಡಿಸಿದಂಥ ಜಲಾಲುದ್ದೀನನೆಂದು ಬೇಕಾದರೆ ಅನ್ನಿರಿ" ಎಂದನು

ಮತ್ತೆ ಭಟ್ಟಾಚಾರ್ಯರು ಎದ್ದು ನಿಂತು:—ಇಂದು ಗೌಡಬಾದಶಹನು ಮುಸಲ್ಮಾನನು; ಆದರೆ ಆ ಮುಸಲ್ಮಾನನು ಸಾಮಾನ್ಯ ಮುಸಲ್ಮಾನನಲ್ಲ. ಹಿಂದೂಧರ್ಮವನ್ನು ತ್ಯಾಗ ಮಾಡಿದ ಹಿಂದೂ ಕುಲ ಸಂಭೂತ ಮುಸಲ್ಮಾನನು. ಇದು ಹಿಂದೂಗೌರವನಾಶದ ಲಕ್ಷಣವು. ಬಹಳ ದಿವಸಗಳ ನಂತರ ವಂಗದ ಹಿಂದೂಪ್ರಜೆಗಳಿಗೆ ಸುಯೋಗವು ಪ್ರಾಪ್ತವಾಗಿತ್ತು. ಬಾದಶಹನ ಪರಿವಾರದಲ್ಲಿ ಅಂತಃಕಲಹ ಹುಟ್ಟಿ ಗೌಡದ ಪ್ರತಿನಿಧಿಯ ಕಾರಭಾರವು ಗಣೇಶನಾರಾಯಣನಿಗೆ ಸುದೈವದಿಂದ ದೊರಕಿತ್ತು. ಹಿಂದೂಗೌರವವು ಮುಂದಡಿ ಯಿಡಹತ್ತಿತ್ತು; ಆದರೆ ಅದು ಯದುನಾರಾಯಣನ ವ್ಯಭಿಚಾರಲಾಲಸೆಯಿಂದ ರಸಾತಳಕ್ಕೆ ಹೋಯಿತು. ಈ ಪ್ರಸಂಗದಲ್ಲಿ ನಿರುತ್ಸಾಹಿತರಾಗದೆ ಪತನೋನ್ಮುಖ ಸಮಾಜವನ್ನು ಎತ್ತಿ ಹಿಡಿಯುವದೇ ಇಂದಿನ ಸಭೆಯ ಉದ್ದೇಶವು. ರಾಣಿಯವರು

ಈ ಸಭೆಗೆ ಪುತ್ರಶೋಕಕಾತರರಾಗಿ ದೀನದೃಷ್ಟಿಯಿಂದ ನಿಮ್ಮೆದುರಿಗೆ ಬಂದಿರುವದಿಲ್ಲ'' ಎಂದು ಹೇಳಿ ಕುಳಿತನು.

ಎರಡನೇ ಹಿಂದೂಮಂತ್ರಿಗಳು ಏಳುವದರೊಳಗೆ ಸೇನಾಪತಿಯಾದ ಎನಾಯಿತನು ಎದ್ದು ನಿಂತು:— ಇಂದಿನ ದರಬಾರದಲ್ಲಿ ನೀವು ನಡೆಯಿಸಿದ ವಿಷಯವಿವೇಚನೆಯ ಬಗ್ಗೆ ಯಾವ ಮುಸಲ್ಮಾನನೂ ತನ್ನ ಅಭಿಪ್ರಾಯ ಕೊಡಲಾರನು; ಮತ್ತು ಅದು ಯೋಗ್ಯವೂ ಅಲ್ಲೆಂದು ಹಿಂದೂ-ಮುಸಲ್ಮಾನ ಜಾತಿಗಳ ಸ್ವಾರ್ಥವು ಪ್ರತ್ಯೇಕವಾಗಿ ಇರುವ ಪ್ರಸಂಗದಲ್ಲಿ ತಮ್ಮ ಮತಕೊಡುವದೆಂದರೆ ಉಭಯ ಜಾತಿಗಳಲ್ಲಿ ಕಲಹವನ್ನು ಹೆಚ್ಚಿಸಿದಂತೆ ಆಗುತ್ತದೆ. ಅಂದಬಳಿಕ ಸುಮ್ಮನಿರುವದೇ ವಿಹಿತವು

ಆಗ ರಾಣಿಯು:-ಎನಾಯಿತ್, ನಿಮ್ಮ ಸರಳ ಮಾತನ್ನು ಕೇಳಿ ಆನಂದವಾಯಿತು ಮುಸಲ್ಮಾನೀ ಸಾಮರ್ಥ್ಯದ ಪ್ರತಿರೋಧಕ್ಕೆ ಯಾವ ಮುಸಲ್ಮಾನನೂ ಸಹಾಯ ಮಾಡುವದು ಬೇಡ. ಅವರು ಪ್ರತಿದ್ವಂದಿಯಾಗಿ ನಿಲ್ಲುವದಕ್ಕಿಂತ ನಿರಪೇಕ್ಷರಾಗಿರುವದು ಯೋಗ್ಯವು ಇಷ್ಟೇ ನಿಮ್ಮ ಅಭಿಪ್ರಾಯವಲ್ಲವೇ? ಆದರೆ ಈ ಸಭೆಯು ಹಿಂದೂ ಮುಸಲ್ಮಾನ ಈ ಉಭಯತರನ್ನು ಸರಿಯಾದ ಪ್ರೇಮ-ಆದರಗಳಿಂದ ಏರಪಾಡಿಕೊಂಡಿರುವದು. ಉಭಯ ಜಾತಿಯ ಪ್ರಜೆಗಳು ಈ ರಾಜ್ಯಛತ್ರದಲ್ಲಿ ಸುಖದಿಂದ ಕಾಲ ಕಳೆಯುವರು ಅಂದಬಳಿಕ ಈ ಮಾನಹಾನಿಯು ಅಪರೋಕ್ಷದಿಂದ ಮುಸಲ್ಮಾನರಿಗೂ ಸಂಬಂಧಿಸುವದು ಭಾದಶಾಹೀ ರಾಜವಂಶದ ಕಲಂಕವು ಎಲ್ಲ ಪ್ರಜೆಗಳಿಗೂ ಸರಿಯಾಗಿ ಹತ್ತುವದು ನೀವು ಹಿಂದೂ ಧರ್ಮದ ಸಲುವಾಗಿ ಕನಿಕರಪಡದಿದ್ದರೂ ಭಾದಶಾಹೀರಾಜ್ಯದ ಸಲುವಾಗಿ ಪಡಲೇ ಬೇಕಾಗುವದು. ಆದ್ದರಿಂದ ಎನಾಯಿತಖಾನ, ಸ್ಥಿರಮನಸ್ಸಿನಿಂದ ಸುಮ್ಮನೆ ಇರ್ರಿ. ನಾನು ಉಳಿದ ಹಿಂದೂಮಂತ್ರಿಗಳ ಮತ ಕೇಳುವೆನು, ಎಂದು ನ್ಯಾಯವಾಗೀಶನ ಮುಖದ ಕಡೆಗೆ ನೋಡಿದಳು.

ನ್ಯಾಯವಾಗೀಶನು ಎದ್ದು ನಿಂತು:—ತಾಯಿ, ಬಹಳ ವ್ಯಥೆಯಾಗುವದು. ಮನಸ್ಸು ಕ್ಷುಬ್ಧವಾಗಿದೆ. ಇಂಥ ಸಾಧ್ವಿಯ ಇಂಥ ಪ್ರತಾಪಿಯಾದ ಮಗನು ಈ ಪ್ರಕಾರ ಆಗುವನೆಂದು ಹೇಗೆ ಭಾವಿಸಬೇಕು? ಸ್ವಪ್ನದಲ್ಲಿ ಸಹ ಅಶಕ್ಯವಾದ ವಿಷಯವು ಘಟಿಸಿತು. ಯದುನಾರಾಯಣನ ಪರಾಕ್ರಮವನ್ನು ನೋಡಿ, ಮನಸ್ಸು ಆಶೆಯನ್ನು ಧರಿಸಿತ್ತು,

ಅಧಃಪತನದ ಮಾರ್ಗಹಿಡಿದ ಹಿಂದೂ ಜಾತಿಯು ಪುನರುದ್ಧಾರವಾಗುವ ದೆಂದು ಭಾವಿಸಿದ್ದೆವು; ಆದರೆ ಇದೇನು ವಿಪರೀತವಾಯಿತಲ್ಲ? ಅಮ್ಮಾ, ಹಿಂದೂಜಾತಿಯ ಮೇಲೆ ಎಂಥ ಗಂಡಾಂತರವು? ದೇವರ ಕೋಪವೆಷ್ಟು? ಇಂಥ ಪ್ರಸಂಗದಲ್ಲಿ ನಾವು ಮಾಡುವದೇನು? ಸುಮ್ಮನೆ ಕಷ್ಟವನ್ನು ಸಹಿಸ ಬೇಕಲ್ಲವೇ? ಪ್ರತಿರೋಧ ಮಾಡಿ ಫಲವೇನು? ಕಾಲವು ಮುಸಲ್ಮಾನರಿಗೆ ಅನುಕೂಲವು; ಇಂಥ ವೇಳೆಯಲ್ಲಿ ಪ್ರತಿರೋಧ ಮಾಡಿದರೆ ನಾವೇ ಪುಡಿ-ಪುಡಿಯಾಗುವೆವು. ಈಗ ನಾವು ಅಪಮಾನ ಕಷ್ಟಗಳನ್ನು ಸಹಿಸಿಕೊಂಡು, ಭಾದುಡೀ-ಸಾತೋಡ ರಾಜ್ಯಗಳು ಹಿಂದಾಗಿ, ಇದ್ದ ಗೌರವವನ್ನು ಕಾಯ್ದು ಕೊಳ್ಳುವದೇ ಉತ್ತಮವು, ಎಂದು ಹೇಳಿ ಆ ವೃದ್ಧ ಸಚಿವನು ನಿಟ್ಟು ಸುರು ಬಿಟ್ಟು ಕುಳಿತನು. ಆಗ ರಾಣಿಯು ಮುಸಲ್ಮಾನ ಮಂತ್ರಿಯಾದ ಅಲ್ಲೀಸಾಹೇಬನ ಅಭಿಪ್ರಾಯವನ್ನು ಕೇಳಿದಳು.

ವೃದ್ಧ ಓಯಾಜಿದಅಲ್ಲಿಯು ಎದ್ದು ನಿಂತು:—ರಾಣೀ ಸರಕಾರ! ನ್ಯಾಯವಾಗೀಶಮಂತ್ರಿಯ ವಿಚಾರವು ಯೋಗ್ಯವು. ನಾವು ಗೌಡದಬಾರ ದೊಳಗಿನ ಗೌರವವನ್ನು ಕಾಯ್ದುಕೊಳ್ಳಲು ಪ್ರಯತ್ನ ಮಾಡಬೇಕು. ಕುಮಾರನು ಮುಸಲ್ಮಾನ ಧರ್ಮ ಸ್ವೀಕರಿಸಿ ಬಾದಶಹನಾದಷ್ಟಕ್ಕೆ ಈ ಭಾದುಡೀ ರಾಜ್ಯದ ಗೌರವವನ್ನು ನಾಶಮಾಡುವ ಪ್ರಯತ್ನಮಾಡುವ ಸಂಭವವಿಲ್ಲ. ಇನ್ನೂ ಕೆಲವು ದಿವಸ ಮಾರ್ಗಪ್ರತೀಕ್ಷೆ ಮಾಡೋಣ. ಅವನ ಇಚ್ಛಿತವು ತಾನೇ ತಿಳಿಯುವದು. ಅವನು ಹಿಂದುವೇಳೆ ಪಕ್ಷ ಪಾತ ಮಾಡಿ ಅಂಧ ವಿಶ್ವಾಸದಿಂದ ಮುಸಲ್ಮಾನರ ಪಕ್ಷವನ್ನೇ ಸಮರ್ಥಿಸ ಹತ್ತಿದರೆ, ಅದರಿಂದ ನಿಜವಾಗಿ ಹಿಂದೂಜನರ ಹಾನಿಯಾಗಹತ್ತಿದರೆ, ಆಗ ಮಾತ್ರ ನಾವು ಅದರ ಪ್ರತೀಕಾರದ ಪ್ರಯತ್ನ ಮಾಡೋಣ. ಈಗ ಮಾಡಿ ದರೆ ಹಿತ ವಿಪರೀತವಾಗಬಹುದು. ನಾವು ಅನೂಪಕುಮಾರನನ್ನು ಸಿಂಹಾ ಸನಕ್ಕೆ ಕೂಡಿಸಿ ಅವನ ಹೆಸರಿನಿಂದ ರಾಜ್ಯಭಾರ ಮಾಡುವಾ.

ಅವನೀನಾಥನು ಹತಾಶ ಸ್ವರದಿಂದ—ಅಲ್ಲೀಸಾಹೇಬ, ಹಿತ ವಿಪರೀತವಾಗಲು ಉಳಿದಿರುವದಾದರೂ ಏನು? ಆಗತಕ್ಕದ್ದು ಆಗಿ ಹೋಗಿದೆ. ಇಷ್ಟಾದರೂ ಚಂಚಲರಾಗಬೇಡಿರೆಂದು ಹೇಳುವಿರಲ್ಲ! ಹಾಗೆ ನೀವು ಹೇಳುವದು ಸಹಜವೇ? ಕಾಲವು ನಿಮಗೆ ಅನುಕೂಲವಿರುವದೆಂದ ಬಳಿಕ ನೀವು ಹೇಳದೆ ಏನು ಮಾಡುವಿರಿ? ಹಿಂದುಗಳ ಸರ್ವನಾಶವು

ನಿಮಗೆ ಶುಭವಷ್ಟೇ? ಜಾತಿ, ಗೌರವ, ಕುಲೀನತ್ವ ಮೊದಲಾದವೆಲ್ಲವುಗಳನ್ನು ಮುಸಲ್ಮಾನ ಸಿಂಹಾಸನದ ಹೆಸರಿನಿಂದ ನೀರುಬಿಟ್ಟು, ಭಾರುಡಿ-ಸಾತೋಡ ರಾಜ್ಯಗಳು ಮುಸಲ್ಮಾನರ ಉಪಹಾಸಕ್ಕೆ ಪಾತ್ರವಾಗಿ ದೀನ ಭಾವದಿಂದ ಜೀವಿಸಬೇಕಲ್ಲವೆ? ಇದು ಉತ್ತಮ ವ್ಯವಸ್ಥೆಯಲ್ಲವೆ? ಇದಕ್ಕಿಂತ ಹೆಚ್ಚಿನ ಸುದೈವವೆಂದರೆ ಹಿಂದೂ ಗುಡಿ-ಗುಂಡಾರ-ಅರಮನೆಗಳ ಕಲ್ಲು-ಮಣ್ಣುಗಳಿಂದ ಮಸೀದೆಗಳಾಗಬೇಕು. ಅವರ ದೇವತೆಗಳು ಮುಸಲ್ಮಾನ ಬಾಲಕರ ಆಟದ ಗೊಂಬೆಗಳಾಗಬೇಕು. ಮಾತು ಮಾತಿಗೆ ಧರ್ಮಭ್ರಷ್ಟತೆ, ಹಿಂದೂ ನಾರಿಯರ ಮಾನಭಂಗ, ಬ್ರಾಹ್ಮಣರ ಬ್ರಾಹ್ಮಣತ್ವದ ನಾಶ! ವಾಹವ್ವಾ!! ಬಹಳ ಚಲೋ ವ್ಯವಸ್ಥೆಯು. ಎನಾಯಿತ್ ಖಾನ, ನೀವೂ ಹೇಳಿರಿ; ಯಾಕೆ ಸುಮ್ಮನೆ ಕುಳಿತಿರುವಿರಿ? ಷಂಢ ಹಿಂದುಗಳಿಗೆ ನಿಮ್ಮ ಸದಭಿಪ್ರಾಯವನ್ನು ಹೇಳಿರಿ.

ಸಭೆಯ ಜನರಲ್ಲಿ ಬಹಳ ಗಡಬಿಡಿಯುಂಟಾಯಿತು. ರಾಣಿಯು ಎನಾಯಿತಖಾನನ ಕಡೆಗೆ ನೋಡಿದಳು ಎನಾಯಿತಖಾನನು ಎದ್ದು ನಿಂತು: ಅಮ್ಮಾ, ಈ ಸಲುವಾಗಿಯೇ ನಾನು ಈ ವಿಷಯದಲ್ಲಿ ಸುಮ್ಮನಿರುವದು ವಿಹಿತವೆಂದು ಹೇಳಿದೆನು. ಈ ವಿಷಯದಲ್ಲಿ ಹಿಂದೂ-ಮುಸಲ್ಮಾನರ ವಿಚಾರವು ಏಕಮತವಾಗುವ ಸಂಭವವೇ ಇಲ್ಲ. ಮಾತೇ! ಕುಮಾರನು ಮುಸಲ್ಮಾನನಾಗಿರುವನೆಂದು ಈ ಎನಾಯಿತನಿಗೆ ಆನಂದವಾಗಿರಬಹುದೇನು? ಕುಮಾರನು ನನ್ನ ಬಾಲ್ಯಸಖನು. ಈ ಎನಾಯಿತಖಾನನ ಪಿತ-ಪಿತಾಮಹರು ಸಹ ಈ ಭಾರುಡೀರಾಜಪರಿವಾರದಿಂದ ಉಪಕೃತರು. ಹೀಗಿದ್ದು ನನ್ನನ್ನು ಕೃತಘ್ನನೆಂದು ಭಾವಿಸಬೇಡ. ಯಾವ ಮುಸಲ್ಮಾನನು ನಿಜವಾದ ಭಾರುಡಿ ಪ್ರಜೆಯೋ, ಅವನು ಈ ಧರ್ಮತ್ಯಾಗದಿಂದ ನೊಂದುಕೊಳ್ಳದೆ ಇರಲಾರನು. ಪ್ರತಿಯೊಬ್ಬರು ಸ್ವಜಾತಿಯಲ್ಲಿ ಇರುವದೇ ಉತ್ತಮವು. ಭಿನ್ನ ಸಮಾಜವನ್ನು ಸೇರುವದು ನನ್ನ ಕ್ಷುದ್ರ ಬುದ್ಧಿಗೆ ವಿಪರೀತ ತೋರುವದು ಅಮ್ಮಾ, ಬಾಲ್ಯದಲ್ಲಿ ಕುಮಾರನ ಧರ್ಮ ವಿಷಯದ ವಿಚಾರಗಳನ್ನು ಕೇಳಿ ನಾನು ಮನಸ್ಸಿನಲ್ಲಿ ಈ ಪ್ರತಾಪಿಯು ಮುಂದೆ ತನ್ನ ಉದಾತ್ತ ವಿಚಾರಗಳಿಂದ ಎಲ್ಲ ಮುಸಲ್ಮಾನರ ಚಿತ್ತವನ್ನು ಆಕರ್ಷಿಸಿ, ಆಸೇತು ಹಿಮಾಚಲದ ವರೆಗೆ ಮತ್ತೆ ಹಿಂದೂ ಗೌರವವನ್ನು ಪ್ರತಿಷ್ಠೆ ಮಾಡುವನೆಂದು ಭಾವಿಸಿದ್ದೆನು; ಆದರೆ ಇದೇನು? ವಿಪರೀತವಾಯಿತಲ್ಲ!

ಮಾತೇ, ಕುಮಾರನು ಧರ್ಮತ್ಯಾಗಿಯಾದರೂ, ಧರ್ಮದ್ರೋಹಿಯಾಗಲಿಕ್ಕಿಲ್ಲ. ಮುಸಲ್ಮಾನನಾದ ಮಾತ್ರಕ್ಕೆ ಹಿಂದೂ ವಿರೋಧಿಯಾಗನು. ಅವನು ಹಿಂದೂ-ಮುಸಲ್ಮಾನರ ಐಕ್ಯದ ಉದ್ದೇಶದಿಂದ ಧರ್ಮತ್ಯಾಗ ಮಾಡಿರುವನು. ಅವನ ಉದ್ದೇಶವು ಸಿದ್ಧಿಯಾಗಲಿ-ಆಗದೆ ಇರಲಿ, ಅವನಿಂದ ಅನ್ಯಾಯ ಘಟಿಸದು, ಎಂದನು. ಅಷ್ಟರಲ್ಲಿ ಕಾಲೀಕಿಶೋರನು ಎದ್ದು ನಿಂತು:— ಎನಾಯಿತಖಾ. ನಿಮ್ಮ ಮಾತಿಗೆ ನಾನು ಒಪ್ಪುವದಿಲ್ಲ. ಧರ್ಮತ್ಯಾಗ ಮಾಡಿದವನಿಗೆ ಧರ್ಮದ್ವೇಷಿಯಾಗುವದಕ್ಕೆ ಎಷ್ಟು ವೇಳೆಯು ಬೇಕು? ಸಮಾಜತ್ಯಾಗಿಯಾದವನು ಸಮಾಜದ್ವೇಷಿಯಾಗುವದೇನು ತಡ? ಅವನು ಮನಸ್ಸಿನಿಂದ ಸಮಾಜವನ್ನು ತ್ಯಾಗ ಮಾಡಿಲ್ಲ. ಸಮಾಜವೇ ಅವನನ್ನು ವ್ಯಭಿಚಾರ ದೋಷದಿಂದ ಹೊರಗೆ ದೂಡಿರುವದು. ಧರ್ಮತ್ಯಾಗ! ಅದರಲ್ಲಿಯೂ ಬೌದ್ಧ ಧರ್ಮವಲ್ಲ, ಜೈನಧರ್ಮವಲ್ಲ, ಹಿಮ್ಮೇಲಿ ಹಿಂದೂದೇಶದ ಹೊರಗಿನ ಮುಸಲ್ಮಾನೀ ಧರ್ಮಸ್ವೀಕಾರ!! ಯಾವನು ತ್ರಿಪುರಾದೇವಿಯಂಥ ಸಾಧ್ವಿಯ ಎದೆಯಲ್ಲಿ ಕಶಾಘಾತ ಮಾಡಿ, ಕುಸುಮ ಕೋಮಲ ಪತ್ನಿಯನ್ನು ಚಿರದುಃಖದಲ್ಲಿ ಮುಳುಗಿಸಿ, ಏಕಮಾತ್ರ ಪುತ್ರನನ್ನು ತ್ಯಾಗಮಾಡಿ ಹೋಗಿರುವನೋ ಅವನಿಗೆ ಯಾವದು ತಾನೆ ಅಶಕ್ಯವು?" ಎಂದು ಹೇಳಿ ರಾಣಿಯ ಕಡೆಗೆ ಮುಖ ತಿರುವಿ:—ಅಮ್ಮಾ, ಈಗ ಮಾತ್ರ ಬಂಗಾಲದಲ್ಲಿ ಹಿಂದೂಧರ್ಮವು ಉಳಿಯುವ ಕಾಲ ಬರಲಿಲ್ಲ. ಎಂಥ ವೇಳೆಯಲ್ಲಿ ಮುಸಲ್ಮಾನರು ಈ ದೇಶದಲ್ಲಿ ಪ್ರವೇಶ ಮಾಡಿರಬಹುದು! ಈ ಪವಿತ್ರ ಭಾದುಡೀ ವಂಶೋದ್ಭವನೇ ಹಿಂದೂಧರ್ಮನಾಶಕನಾಗಬೇಕೆ? ಎಂದಂದು ಕುಳಿತನು.

ಆಗ ರಾಣಿಯು ಎದ್ದು ನಿಂತು:—ಭಟ್ಟಾಚಾರ್ಯ, ಶಾಂತನಾಗು. ತ್ರಿಪುರಾದೇವಿಯು ಇದನ್ನು ಸುಮ್ಮನೆ ಸಹಿಸುವಳೆಂದು ಭಾವಿಸಬೇಡ. ದೇವಬ್ರಾಹ್ಮಣರ ಅಪಮಾನ, ಹಿಂದೂನಾರಿಯರ ಮಾನಭಂಗ ಇವುಗಳನ್ನು ಎಂದೂ ಸಹಿಸಳು. ಯಾವನು ಅಗಲಿರುವನೋ ಅವನು ದೂರ ಇರಲಿ. ಅವನು ನಮ್ಮ ಪಾಲಿಗೆ ಮೃತನು. ಅವನ ಮೃತ ಆತ್ಮವು ಗೌಡ ಸಿಂಹಾಸನದ ಮೇಲೆ ಕುಳಿತಿರುವದು. ನಾವು ಆ ಪ್ರೇತತ್ವದಿಂದ ಅವನಿಗೆ ಮುಕ್ತಿಯನ್ನು ಕೊಡಬೇಕು. ನನ್ನ ಸ್ತನಪಾನ ಮಾಡಿದವನು ಇಂಥ ಕುಲಾಂಗಾರನೇ? ಏಳಿರಿ ಹಿಂದುಗಳೇ ಸಿದ್ಧರಾಗಿರಿ. ರಾಜಾ, ಸೈನ್ಯವನ್ನು ಕೂಡಿಸು

ಬ್ರಾಹ್ಮಣರೇ ವೇದಘೋಷ ಮಾಡಿರಿ. ಆಶೀರ್ವಾದ ಕೊಡಿರಿ. ಹಿಂದು ಗಳಿಗೆ ಸಹ ವಿಲಂಬ ಬೇಡ. ತಡೆದರೆ ಅವಸಾನವು ಕಡಿಮೆಯಾಗುವದು. ಇನ್ನೂ ಅವನು ಎಲ್ಲ ಮುಸಲ್ಮಾನರ ಚಿತ್ತವನ್ನು ಆಕರ್ಷಿಸಿಕೊಂಡಿರ ಲಿಕ್ಕಿಲ್ಲ. ಅವನಿಗೆ ಶತ್ರುಗಳೂ ಇರಬಹುದು. ಇದೇ ವೇಳೆಯಲ್ಲಿ ಆ ಕುಲಕಲಂಕನ ನಾಶಮಾಡೋಣ! ಎಲ್ಲರೂ ಹಿಂದೂ ಧರ್ಮದ ಹೆಸರಿನಿಂದ, ಸಮಾಜದ ಹೆಸರಿನಿಂದ ಜಯಜಯಕಾರ ಮಾಡಿರಿ. ಹಿಂದೂ ಧರ್ಮವು ಸನಾತನವಾದದ್ದು. ಹಿಂದೂ ಜಾತಿಯು ಶಾಶ್ವತವಾದದ್ದು. ಹಿಂದೂ ಸಮಾಜವು ಸ್ವೇಚ್ಛಾಚಾರಕ್ಕೆ ಆಶ್ರಯ ಕೊಡುವದಿಲ್ಲೆಂಬದು ಎಲ್ಲರಿಗೂ ಗೊತ್ತಾಗಲಿ.

ನಂತರ ರಾಣಿಯು ಮುಸಲ್ಮಾನ ಜನರ ಕಡೆಗೆ ಮೋರೆ ತಿರುವಿ:— ನನ್ನ ಪ್ರಿಯ ಮುಸಲ್ಮಾನ ಪ್ರಜೆಗಳೇ, ಭೀತರಾಗಬೇಡಿರಿ ಇದು ಹಿಂದೂತ್ವ ರಕ್ಷಣೆಯ ಸಲುವಾಗಿ ಹಿಂದೂ ಕುಲಾಂಗಾರನ ಸಂಗಡ ಯುದ್ಧವು. ಈ ಕೆಲಸಕ್ಕೆ ನಿಮ್ಮ ಸಹಾಯದ ಉಪಯೋಗವಿಲ್ಲ. ನೀವು ನಿಶ್ಚಿಂತ ರಾಗಿ ಇರಬೇಕು. ಇದಕ್ಕಿಂತ ಹೆಚ್ಚಾಗಿ ನಿಮ್ಮ ಮೇಲೆ ಪ್ರೇಮ ಮಾಡ ಲ್ಪಡುವದು. ಇಂದು ನಾನು ಸಂತಾನ ವರ್ಜಿತಳು. ಇಂದು ಪುತ್ರನ ಮೇಲಿನ ಆದರವನ್ನೆಲ್ಲ ಒಟ್ಟುಗೂಡಿಸಿ ನಿಮ್ಮೆಲ್ಲರಲ್ಲಿ ಸಮನಾಗಿ ಹಂಚಿ ಕೊಡುವೆನು. ನೀವು ಸುಖದಿಂದ ಕಾಲಕಳೆಯಿರಿ. ಎನಾಯಿತ್, ಮುಸ ಲ್ಮಾನರು ಭಾದುಡೀ ರಾಜ್ಯದ ಪರವಾಗಿ ಶಸ್ತ್ರವೆತ್ತುವರೋ ಹೇಗೆಂಬ ದನ್ನು ನೀನು ವಿಚಾರಿಸು.

ಎನಾಯಿತಖಾನನು:-"ಅವ್ವಾ" ಇಷ್ಟು ಅಂದು ಸುಮ್ಮನಾದನು.

ರಾಣಿಯು ಮುಗುಳು ನಗೆಯಿಂದ:-ಎನಾಯಿತ್, ತಿಳಿಯಿತು.-ತಿಳಿ ಯಿತು. ಭಾದುಡಿಯ ಮುಸಲ್ಮಾನ ಪ್ರಜೆಗಳು ಕೃತಘ್ನರಲ್ಲವೆಂಬುದು ನನಗೆ ಗೊತ್ತಿರುವದು. ಆದರೂ ಅವರಿಂದ ಒಪ್ಪಿಗೆಯನ್ನು ಇಚ್ಛಿಸುತ್ತೇನೆ. ಆಗ ಎಲ್ಲ ಮುಸಲ್ಮಾನರೂ ಏಕವಾಕ್ಯದಿಂದ:--"ಹಿಂದುವೇ ಆಗಲಿ, ಮುಸಲ್ಮಾ ನನೇ ಆಗಲಿ ಭಾದುಡೀ ರಾಜ್ಯದ ಶತ್ರುವು ಎಲ್ಲ ಮುಸಲ್ಮಾನರ ಶತ್ರುವೆಂದು ತಿಳಿಯುತ್ತೇವೆ ನಾವು ನಮ್ಮ ಜನ್ಮಭೂಮಿಯಾದ ಭಾದು ಡಿಯ ಸಲುವಾಗಿ ನಮ್ಮ ದೇಹದಲ್ಲಿ ರಕ್ತದ ಹನಿ ಇರುವ ವರೆಗೆ ಯುದ್ಧ ಮಾಡುತ್ತೇವೆ.

ರಾಣಿ:—ಎನಾಯಿತಖಾನ,

ಎನಾಯಿತ:—ಅಪ್ಪಣೆಯಾಗಬೇಕು.

ರಾಣಿ:—ಸ್ವಲ್ಪ ಹಿಂದು ಸೈನ್ಯವನ್ನು ನಗರ ರಕ್ಷಣೆಗೆ ಇಟ್ಟು ಉಳಿದ ಸೈನ್ಯ ತಕ್ಕೊಂಡು ಯುದ್ಧಕ್ಕೆ ಹೊರಡುತ್ತೇನೆ. ದುರ್ಗರಕ್ಷಣದ ಭಾರವು ನಿನ್ನ ಮೇಲೆ. ಮಾಡುವಿಯಷ್ಟೆ?

ಎನಾಯಿತ್:—ಅಮ್ಮಾ, ನಿಮ್ಮ ಆಶೀರ್ವಾದವಿದ್ದರೆ ಬೇಕಾದ್ದನ್ನು ಮಾಡುವೆನು.

ರಾಣಿ:—ಮುಸಲ್ಮಾನರು ಉಪಕಾರವನ್ನು ಹೇಗೆ ತೀರಿಸುವರೆಂಬದು ಈ ಯುದ್ಧದಲ್ಲಿ ಗೊತ್ತಾಗುವದು. ಆಗಲಿ. ಎಲ್ಲರೂ ನಿಮ್ಮ ನಿಮ್ಮ ಕರ್ತವ್ಯಪಾಲನೆಯನ್ನು ಮಾಡಿರಿ. ಇನ್ನು ವಿಲಂಬ ಮಾಡಿ ಉಪಯೋಗವಿಲ್ಲ.

ಎಲ್ಲರೂ ರಾಣಿಯ ಹೆಸರಿನಿಂದ ಜಯಜಯಕಾರವನ್ನು ಮಾಡಿದರು. ಸಭೆಯ ಕಾರ್ಯವು ಮುಗಿಯಿತು.

— — ——



ನಾಳೆ ಪ್ರಾತಃಕಾಲಕ್ಕೆ ಯುದ್ಧಯಾತ್ರೆಯು ಇಂದಿನ ರಾತ್ರಿಯ ಅವಕಾಶವೇ ಅವಕಾಶವು ಭಾದುಡೀ ರಾಜ್ಯದ ಎಲ್ಲ ಊರುಗಳಿಗೂ ಯುದ್ಧದ ಆಮಂತ್ರಣವು ಕುದುರೆ ಸ್ವಾರರಿಂದ ರಾತ್ರಿಯೇ ಮುಟ್ಟಿಸಲ್ಪಟ್ಟಿತು. ೧೮ ವರ್ಷದ ಮೇಲಿನ ೫೦ ವರ್ಷದ ಒಳಗಿನಪ್ರತಿಯೊಬ್ಬರು ಸಿದ್ಧರಾಗತಕ್ಕದ್ದು. ರಾಣಿಯ ಅಪ್ಪಣೆಯನ್ನು ಮೀರುವದು ಯಾರಿಗೆ ಶಕ್ಯವು?

ನೋಡ ನೋಡುವಷ್ಟರಲ್ಲಿ ಪ್ರದೋಷ ಕಾಲದ ಮ್ಲಾನಛಾಯೆಯು ಗಾಢಾಂಧಕಾರದಲ್ಲಿ ವಿಲೀನವಾಯಿತು. ಸಂಧ್ಯಾಸೂಚಕ ತುತೂರಿಯು ಬಾರಿಸಲ್ಪಟ್ಟಿತು. ಎಲ್ಲ ಕಡೆಗೂ ದೀಪಗಳು ಪ್ರಜ್ವಲಿತವಾದವು. ನವಕಿಶೋರಿಯ ಕೋಣೆಯಲ್ಲಿಯೂ ದೀಪವು ಹತ್ತಿತು. ಇದೇನು? ಈ ವೇಳೆಯಲ್ಲಿ ಮಲಗಿಕೊಂಡವರು ಯಾರು? ನವಕಿಶೋರಿಯೇನು? ಅವಳ ಪರಿಚಯವೇ ಹತ್ತುವಂತೆ ಇಲ್ಲ. ಮುಖವು ಕಪ್ಪಾಗಿದೆ. ಕಣ್ಣುಗಳು ಒಳನಟ್ಟಿವೆ. ಬಾ, ಯಮುನಾರಾಯಣ, ಕಿಶೋರಿಯು ಇವಳೇ ಏನು ನೋಡು ಬಾ! ಇವಳು ಕಿಶೋರಿಯಲ್ಲ, ಕಿಶೋರಿಯ ಛಾಯೆಯು!

ಯದುನಾರಾಯಣ, ಇದೇ ಕಿಶೋರಿಯನ್ನು ವೇದಮಂತ್ರಗಳ ಗಲಭೆಯಲ್ಲಿ ವಿವಾಹ ಮಂಟಪದೊಳಗೆ ನವವಧುವಿನ ವೇಷದಲ್ಲಿ ನೋಡಿದ್ದೆಯಲ್ಲವೆ? ಆ ನೋಟವು ಒಂದು ಅರಕ್ಷಣವಾದರೂ ನಿನ್ನ ಮನಸ್ಸನ್ನು ಆಕರ್ಷಣ ಮಾಡಿಕೊಂಡಿತ್ತಲ್ಲವೆ? ಆಗ ಅವಳು ಒಂಭತ್ತು ವರ್ಷದ ಬಾಲಿಕೆಯು. ಆ ಬಾಲಿಕಾ ಅವಸ್ಥೆಯಿಂದ ಈ ವರೆಗೆ ಅವಳ ಸೌಂದರ್ಯದ ಉಪಭೋಗ ಮಾಡುತ್ತ ಬಂದಿರುವಿಯಲ್ಲವೆ? ಅದೇ ಈಗ ಬಂದು ನೋಡು! ನಿಷ್ಠುರ ಪುರುಷ! ಕನಿಕರ ಹುಟ್ಟದೇನು? ನೀನು ಅವಳ ಬಾಹ್ಯಸೌಂದರ್ಯ ಪಾನ ಮಾಡಿದಂತೆ ಹೃದಯಸ್ಥ ಪ್ರೇಮ ಮಧುವನ್ನು ಕೂಡ ಸ್ವಾದ ಮಾಡಿರುವಿಯಲ್ಲವೆ?

ಎಲೈ ನಿಷ್ಠುರ ಲಾವಣ್ಯವೇ! ನೀನು ಈ ವರೆಗೆ ಅವಳ ಅಂಗಾಂಗಗಳಲ್ಲಿ ಕ್ರೀಡಿಸಿ ಪ್ರೇಮಾದರಗಳನ್ನು ಹೊಂದಿ, ಕಷ್ಟಕಾಲದಲ್ಲಿ ಓಡಿಗಾಗುವೆಯಾ? ನೀನೂ ಕೃತಘ್ನನು.

ಈ ವಿಷಯದಲ್ಲಿ ದೋಷಿಯಾರು? ಸುಂದರ ಹೃದಯವು ಸ್ಮಶಾನದಂತಾಯಿತು. ದೊಡ್ಡ ರಾಜ್ಯವು ಹಾಳಾಗಿ ಹೋಯಿತು. ಇದರ ಹೊಣೆಯಾರು? ,ಸಹೃದಯ ಪಾಠಕ-ಪಾಠಕಿಯರೇ ನೀವು ಹೇಳಬಲ್ಲಿರಾ? ನವ ಕಿಶೋರಿಯ ಅವಸ್ಥೆಯನ್ನು ನೋಡಿದರೆ ಎಲ್ಲರ ಹೃದಯಗಳೂ ಕರಗಿ ನೀರಾಗುವವು. ಅವಳ ದುರ್ದಶೆಯು ಹೀಗಾದ್ದರ ದೋಷವು ಯಾರ ಕಡೆಗೆ? ಕೆಲವರು ದೋಷವು ಯದುನಾರಾಯಣನದು. ಸಮಾಜದ ನಿಯಮಗಳನ್ನು ಮೀರಿದ್ದು ಅಯೋಗ್ಯವೆಂದು ಹೇಳಬಹುದು; ಆದರೆ ಸಮಾಜವು ಮಾನವಕೃತನಿಯಮಬದ್ಧವಲ್ಲವೇ? ಮನುಷ್ಯನ ಕೃತಿಗಳಲ್ಲಿ ಶಾಶ್ವತವಾದವುಗಳು ಯಾವವು? ಮತ್ತು ಅವು ಸರ್ವ ವಾದಸಮ್ಮತವಾಗಬಲ್ಲವೆ? ಸರ್ವಾಂಗ ಸುಂದರವಾಗಬಲ್ಲವೆ? ಆಗದಿದ್ದರೂ ಈ ವರೆಗೆ ಅವುಗಳ ಪಾಲನೆ ಮಾಡುತ್ತ ಬಂದಿದ್ದು ಈಗ ಮೀರುವದು ಹಿತಕರವಲ್ಲ. ಇದಲ್ಲದೆ ಸಮಾಜದ ರೀತಿ-ವಿಚಾರಗಳು ಯಾವಾಗಲೂ ಒಂದೇ ಸವನೆ ಇರಲಾರವು. ದೇಶ ಕಾಲಭೇದದಿಂದ ಅವುಗಳಲ್ಲಿ ಹೆಚ್ಚು ಕಡಿಮೆ ಮಾಡಲಿಕ್ಕೇ ಬೇಕು. ಇಲ್ಲದಿದ್ದರೆ ಅನೇಕ ಪ್ರಾಣಿಗಳ ದುರ್ದಶೆಯಾಗುವದು. ಅಂದಬಳಿಕ ಈ ತಪ್ಪು ರಕ್ಷಣವೇ ಶೀಲವುಳ್ಳಂಥ ಸಮಾಜದ್ದು. ಸಮಾಜಸುಧಾರಣೆಯಾಗದಿದ್ದರೆ ಈ ಪ್ರಕಾರ ಒಂದೊಂದರಂತೆ ಎಷ್ಟೋ ಸಂಸಾರಗಳು ನಾಶವಾಗಿ ಹೋಗು

ವವು; ಮತ್ತು ಪರಧರ್ಮೀಯರ ಉಪಟಳದಿಂದ ಹಿಂದೂಧರ್ಮವು ಕ್ಷೀಣವಾಗಹತ್ತುವದು. ಈ ಚರ್ಚೆಯು ನಮಗೇಕೆ? ನಾವು ಪೂರ್ವದ ಕರ್ಮಫಲವೆಂದು ಸುಮ್ಮನೆ ಕೂಡ್ರುವಾ.

ಕಿಶೋರಿಯು ಹಾಸಿಗೆಯಿಂದ ಎದ್ದು ಕಿಡಕಿಯ ಹತ್ತರ ಬಂದು ನಿಂತಳು. ಅವಳ ಮನಸ್ಸಿಗೆ ಸಮಾಧಾನವಿಲ್ಲ. ಅವಳು ಕೆಲವು ಹೊತ್ತು ಆಕಾಶದ ಕಡೆಗೆ ನೋಡಿ ನಂತರ ತನ್ನಲ್ಲಿ ತಾನೇ ಈ ಪ್ರಕಾರ ಮಾತಾಡ ಹತ್ತಿದಳು:—ಪ್ರಿಯತಮ! ನಿನ್ನನ್ನು ತಿರಸ್ಕರಿಸುವ ಸಾಮರ್ಥ್ಯವು ನನ್ನ ದಲ್ಲ. ನಿನ್ನ ಮೇಲೆ ನನ್ನ ಅಭಿಮಾನವು ಹೇಗೆ ನಡೆಯಬೇಕು? ನಿನ್ನ ಯೋಗ್ಯತೆಯು ಮಹತ್ತರವಾದದ್ದು. ನೀನು ಅನುಸರಿಸಿದ ಮಾರ್ಗವು ನನಗೆ ಅಶಕ್ಯವಾದದ್ದೆಂಬದು ತಿಳಿದರೂ, ಈ ದಾರುಣ ವ್ಯಥೆಯನ್ನು ತಡೆ ಯುವದು ಆಗಲೊಲ್ಲದು. ಹಿಂದೂನಾರಿಯರ ಪತಿಯು ಹಿಂದೇ ಜನ್ಮಕ್ಕೆ ಸಂಬಂಧಿಸಿದವನಲ್ಲ ಜನ್ಮಜನ್ಮಾಂತರ ಸಂಬಂಧವು ಅದಕ್ಕೆ ಇರುತ್ತ ದೆಂಬದನ್ನು ಬಲ್ಲೆನು. ನೀವು ಹೊರಗೆ ಹೋದಂತೆ ಕಂಡರೂ ನನ್ನ ಹೃದಯ ಮಧ್ಯದಲ್ಲಿ ನಿಮ್ಮ ಮೂರ್ತಿಯು ಯಾವಾಗಲೂ ವಿರಾಜ ಮಾನವಾಗಿರುತ್ತದೆ. ನೀವು ಮುಸಲ್ಮಾನ ಧರ್ಮಸ್ವೀಕಾರ ಮಾಡಿದಿರಿ. ಅಶಮಾನಳನ್ನು ವಿವಾಹ ಮಾಡಿಕೊಂಡಿರಿ, ಎಂಬದನ್ನು ಕೇಳಿ ಮೊದಲು ನನಗೆ ಅಭಿಮಾನವು ಹುಟ್ಟಿತ್ತು; ಆದರೆ ಆ ಅಭಿಮಾನವು ನಿಷ್ಫಲವು! ಇನ್ನು ಆ ಅಭಿಮಾನವ ತಾಳುವದಿಲ್ಲ. ನಾನು ನಿಮ್ಮ ಸುಖಕ್ಕೆ ಅಡ್ಡ ಬರಲು ಕಾರಣವೇನು? ನಿಮ್ಮ ಸುಖವೇ ನನ್ನ ಸುಖವು; ಆದರೆ ನಾಥ, ನೀವು ನನಗೆ ಕಡೆಯ ಭೆಟ್ಟಿಯನ್ನೇಕೆ ಕೊಡಲಿಲ್ಲ? ಹೋಗುವಾಗ ಒಮ್ಮೆ ಗಲ್ಲ ವನ್ನು ಹಿಡಿದು:—ಕಿಶೋರಿ, ನಾನು ನನ್ನ ಕರ್ತವ್ಯದ (ಉದ್ದೇಶದ)ಸಲು ವಾಗಿ ಹೋಗುತ್ತೇನೆ ನೀನು ಅಧೀರಳಾಗಬೇಡ!! ಎಂದು ಏಕೆ ಹೇಳಲಿಲ್ಲ! ನಾನು ವಂಚಿತಳಾಗಿರುವೆನೆಂದು ನಿಮ್ಮ ಮೇಲೆ ಅವಿಶ್ವಾಸವನ್ನು ತಾಳಿಲ್ಲ. ನೀವು ಹೃದಯ ಹೀನರೆಂದು ಭಾವಿಸಿಲ್ಲ. ನೀವು ರೂಪಕ್ಕೆ ಮರುಳಾಗಿ, ಸಾಮ್ರಾಜ್ಯಕ್ಕೆ ಮರುಳಾಗಿ ಈ ಪ್ರಕಾರ ಮಾಡಿಲ್ಲವೆಂಬದು ನನಗೆ ಗೊತ್ತಿ ರುವದು; ಆದರೆ ಮಾಡಲೇನು? ಅಶಾಂತಿ, ಅಸ್ಥಿರತೆಗಳು ನನ್ನನ್ನು ಹುಚ್ಚಿಯನ್ನಾಗಿ ಮಾಡಿವೆ; ಒಮ್ಮೆ ಗೋಪನವಾಗಿ ದರ್ಶನವನ್ನು ಕೊಡ ಬಾರದೆ? ನಿಮ್ಮ ಕಿಶೋರಿಯು ದುರ್ಬಲಳಾಗಿರುವಳು. ಕಾರಣ ನೀವು

ಇದ್ದ ವೇಷದಿಂದಲೇ ಬಂದು ಮನಸ್ಸಿಗೆ ಸಮಾಧಾನವನ್ನು ಕೊಡಿರಿ. ಕಿಶೋರಿಯು ಕಂಠವು ಬಿಗಿಯಿತು. ಅವಳು ಗಟ್ಟಿಯಾಗಿ ರೋದನ ಮಾಡಹತ್ತಿದಳು. ಅದೇ ವೇಳೆಯಲ್ಲಿ ತ್ರಿಪುರಾದೇವಿಯು:—ಕಿಶೋರಿ, ಮಗೂ! ಕಿಶೋರಿ, ಎಂದು ಹೊಳಗೆ ಬಂದಳು. ಅವಳು ಕಿಶೋರಿಯನ್ನು ನೋಡಿದ ಕೂಡಲೆ ಕ್ರೋಧ-ಸಂತಪ್ತಳಾಗಿ:—ಏನು, ಅಳುವಿಯಾ? ಬಹಳ ಚಲೋದು. ಸುಲಕ್ಷಣವು ಮೂರುಸಂಜೆಯ ಮುಂದೆ, ದೀಪಹಚ್ಚುವ ವೇಳೆ ಯಲ್ಲಿ, ಗುಡಿಗಳಲ್ಲಿ ಮಂಗಳಾರತಿ ಮಾಡುವ ಸಮಯದಲ್ಲಿ, ನಿನ್ನ ಅಳುವು. ಭಾದುಡೀ ರಾಜ್ಯಕ್ಕೆ ಕಲ್ಯಾಣ ಮಾಡುವದು ಅಳು. ಇಷ್ಟು ಶೋಕವು ಯಾರ ಸಲುವಾಗಿ? ಜಾತಿ-ಮರ್ಯಾದೆಯನ್ನು ತೊರೆದು, ಬ್ರಾಹ್ಮಣ ವಂಶಕ್ಕೆ ಕಲಂಕಸ್ವರೂಪನಾಗಿ, ಯವನ ಕನ್ನಿಕೆಯ ಪ್ರೇಮಪಾಶಾಬದ್ಧ ನಾದ ನಿನ್ನ ಪತಿಯ ಸಲುವಾಗಿ ಶೋಕವೇ? ನಿನ್ನ ಪತಿಯು ಹೋದ ದಿವಸವೇ ನಿನಗೇಕೆ ಮರಣ ಬರಬಾರದು? ನಿನಗೆ ಧಿಕ್ಕಾರವು! ಇನ್ನೂ ನಿನ್ನ ಮೈ ಮೇಲೆ ಅಲಂಕಾರಗಳೇ? ಇನ್ನೂ ವಿಲಾಸಭೋಗಾಪೇಕ್ಷೆಯೇ? ಎಂದು ಸಿಟ್ಟಿನಿಂದ ಅವಳ ಮೈಮೇಲಿನ ಅಲಂಕಾರಗಳನ್ನು ಗೆತೆತೆಗೆದು ಬೀಸಿ ಒಗೆಯ ಹತ್ತಿದಳು.

ಈ ಗದ್ದಲವನ್ನು ಕೇಳಿ ಅವನೀನಾಥನು ಅಲ್ಲಿಗೆ ಬಂದನು. ಇದ ನ್ನೆಲ್ಲ ನೋಡಿ ಅವನು ರಾಣಿಯ ಪಾದಗಳನ್ನು ಗಟ್ಟಿಯಾಗಿ ಹಿಡಿದು ಕೊಂಡು:—ರಾಣಿ, ಕ್ಷಮೆ ಮಾಡು ದಯೆದೋರಿಸು. ವಿಪತ್ನೀಕನಾದ ನನ್ನ ಏಕಮಾತ್ರ ಪುತ್ರಿಯ ದುರವಸ್ಥೆಯನ್ನು ನೋಡಲಾರೆನು. ನನ್ನ ಕಡೆಯ ಪ್ರಾರ್ಥನೆಯನ್ನು ಕೇಳು. ನಾನು ನನ್ನ ಮಗಳನ್ನು ಸಾತೋ ಡಕ್ಕೆ ಕರೆದುಕೊಂಡು ಹೋಗಿ ಯದುನಾರಾಯಣನ ಬಂಗಾರದ ಮೂರ್ತಿಯ ಹತ್ತರ ಕುಳ್ಳಿರಿಸುತ್ತೇನೆ. ಮಗಳ ಈ ಭಯಂಕರವಾದ ವೈಧವ್ಯಾವಸ್ಥೆಯನ್ನು ನೋಡಲಾರೆನು.

ಕ್ರೋಧವು ಇಮ್ಮಡಿಯಾಗಿ ರಾಣಿಯು:—ರಾಜಾ, ನೀನು ಬ್ರಾಹ್ಮಣ ಕುಲತಿಲಕನಲ್ಲವೆ? ನಿನ್ನ ಸಮಾಜ ನೀತಿಯು ಇದೇ ಏನು? ನಿನ್ನ ಅಳಿ ಯನು ವ್ಯಭಿಚಾರಿಯಾಗಿರಲು, ನೀನು ನಿನ್ನ ಮಗಳ ಮುಖವನ್ನು ನೋಡಿ ಅಂಥ ಕುಲಾಂಗಾರನ ಬಂಗಾರದ ಪ್ರತಿಮೆಯನ್ನು ಮಾಡಿಸುವೆಯಾ? ಧಿಕ್ಕಾರವು!! ಎಷ್ಟು ಅನಾಚಾರವು? ತ್ರಿಪುರಾದೇವಿಯು ಇದಕ್ಕೆ

ಆಶ್ರಯ ಕೊಡಳು. ಕಿಶೋರಿಯ ಮೇಲೆ ನಿನ್ನ ಅಧಿಕಾರವಿಲ್ಲ. ನನ್ನ ಸೊಸೆಯನ್ನು ನಾನು ಬೇಕಾದಂತೆ ನಡೆಸಿಕೊಳ್ಳುತ್ತೇನೆ. ನನ್ನ ಮನೆತನದ ಗೌರವದ ಸಲುವಾಗಿ ಅವಳನ್ನು ಬೇಕಾದಂತೆ ಇಡುತ್ತೇನೆ. ನಿನಗೆ ನೋಡುವದು ಆಗದಿದ್ದರೆ ಅಂತಃಪುರಕ್ಕೆ ಬರಬೇಡ. ನನ್ನ ಮಗನು ಮೃತನು; ಕಾರಣ ನಾನು ನನ್ನ ಕೈಯಿಂದ ಕಿಶೋರಿಗೆ ವೈಧವ್ಯಾವಸ್ಥೆಯ ಉಡುವುಗಳನ್ನು ತೊಡಿಸುವೆನು

ಅಷ್ಟರಲ್ಲಿ ಕಾಲಿಕಿಶೋರ ಬಟ್ಟಾಚಾರ್ಯರು ಅಲ್ಲಿಗೆ ಬಂದರು. ಅವರು ಶಾಂತಸ್ವರದಿಂದ:--ರಾಣೀ, ಶಾಂತಳಾಗು, ಎಂದರು.

ರಾಣಿಯು ಎಲ್ಲ ಅಲಂಕಾರಗಳನ್ನು ಬಿಚ್ಚಿದ್ದಳು. ಮಾಂಗಲ್ಯ ಸುತ್ರವೊಂದು ಇತ್ತು ಆಗ ಅವಳು:—ಬ್ರಾಹ್ಮಣ, ಎಂದಳು.

ಕಾಲಿಕಿಶೋರ:—ಕಿಶೋರಿಗೆ ಈಗಳೇ ವೈಧವ್ಯಾವಸ್ಥೆಯ ಉಡುವುಗಳನ್ನು ತೊಡಿಸಿದರೆ ನಿನ್ನ ಮನೋಭೀಷ್ಟವು ಪೂರ್ಣವಾಗುವದೇ? ಮೃತನ ಸಂಸ್ಕಾರವು ಪೂರ್ಣವಾದನಂತರ ಸತಿಗೆ ವೈಧವ್ಯವೆಂದು ಶಾಸ್ತ್ರವು ಹೇಳುತ್ತದೆ; ಎಂದು ಕಿಶೋರಿಯ ತಲೆಯ ಮೇಲೆ ಕೈಯಿಟ್ಟು:—ಮಗೂ ಲಕ್ಷ್ಮೀದೇವಿ, ನೀನು ಅಳಬೇಡ! ಜಾನಕೀಮಾತೆಯು ಎಷ್ಟು ಕಷ್ಟ ಸೋಸಿರುವಳು? ಎಂದನು

ರಾಣಿಯು ಸ್ವಲ್ಪ ಶಾಂತಳಾದಳು. ಅಷ್ಟರಲ್ಲಿ ಅನೂಪನು ಆಡುತ್ತ-ಕುಣಿಯುತ್ತ ಅಲ್ಲಿಗೆ ಬಂದನು. ಆಗ ಭಟ್ಟಾಚಾರ್ಯ ಮಹಾಶಯನು:--ರಾಣೀ, ಇತ್ತ ನೋಡು. ಈ ವಯಸ್ಸಿನಲ್ಲಿ ನಿನ್ನ ಯದು ಹೀಗೆಯೇ ಕಾಣಿಸುತ್ತಿದ್ದನು ಇಕೋ ನೋಡು, ಸರಳವಾದ ನಾಸಿಕ, ಆ ಕರ್ಣವಿಶ್ರಾಂತ ಚಕ್ಷುಗಳು, ಅಗಲವಾದ ಹಣೆಯು, ಅಂಗಕಾಂತಿಯು ಎಲ್ಲವನ್ನೂ ನೋಡಿದರೆ ಯದುನಾರಾಯಣನನ್ನು ಮರೆಯುವಿ.

ರಾಣಿಯ ಎರಡೂ ಕಣ್ಣುಗಳಲ್ಲಿ ನೀರುಗಳು. ಅವಳು ಗಟ್ಟಿಯಾಗಿ ಅತ್ತುಬಿಟ್ಟಳು; ಮತ್ತು ಅನೂಪನನ್ನು ಎತ್ತಿಕೊಂಡು:ತಮ್ಮಾ ಮಗೂ, ನನ್ನ ಸರ್ವಸ್ವವೂ ನೀನೇ. ನನ್ನ ವಂಶತಿಲಕನು ನೀನೇ, ಎಂದು ಚುಂಬನಗಳ ಮಳೆಸುರಿಸಿದಳು ಅಷ್ಟರಲ್ಲಿ ದೇವಿಯ ಗುಡಿಯ ಆರತಿಯ ವೇಳೆಯಾಗಿ ವಾದ್ಯಗಳ ಸಪ್ಪಳವು ಕೇಳಬರಲು, ಅಲ್ಲಿಂದೆದ್ದು ಎಲ್ಲರೂ ಹೊರಟು ಹೋದರು.

---

## ೩ನೇ ಭಾಗ.

೧

"ಕಾಶೀಮ ನನ್ನ ಗುರ್ತು ಹತ್ತುವದೇನು?"

"ಬೇಗಮ್ ಸಾಹೇಬ, ಹತ್ತದೇನು ಮಾಡೀತು"

"ಅದಾರಿಗೆ ಗೊತ್ತು ಕಾಸೀಮ, ವಾತಾವರಣವೇ ಬದಲಾಗಿರುವದು! ಮಾಡುವದೇನು? ದೈವವೇ ಪ್ರತಿಕೂಲವಾದರೆ, ಹಿಡಿದ ಬಂಗಾರವು ಸಹ ಮಣ್ಣಾಗುವದು. ಅಂತೇ, ನಿನ್ನಂಥ ಅಪ್ರತಿಮವೀರರನ್ನು ನಂಬಿದರೂ ಅಪಯಶವಾಯಿತು; ಅಂದಬಳಿಕ ಜಗತ್ತಿನಲ್ಲಿ ಯಾರ ಮೇಲೆ ನಂಬಿಗೆಯನ್ನಿಡಬೇಕು? ಕಾಸೀಮ! ಹಿಂದು ಕಾಲದಲ್ಲಿ ನಿನ್ನ ಮೇಲೆ ಪೂರ್ಣ ನಂಬಿಗೆಯನ್ನಿಟ್ಟಿದ್ದೆನು. ಸ್ಮರಣದಲ್ಲಿರುವದೇ?"

"ನೆನಪಿರದೇನು ಮಾಡೀತು? ಶಹಜಾದಾ-ಶಹಜಾದರ ನಡುವಿನ ಬಡಿದಾಟದ ಸಮಯವು. ವಿಲಾಸಭೋಗಿಯಾದ ನಸೆರಿತ್ ಶಹನಿಗೆ ಯುದ್ಧ ಮಾಡುವ ಮನಸ್ಸಿದ್ದಿಲ್ಲ. ಸ್ವಜಾತಿಯ ಅಭಿಮಾನಿಯಾದರೂ ಸಾಮ್ರಾಜ್ಯದ ಪ್ರತಿಷ್ಠಾಪನೆಯ ಸಾಮರ್ಥ್ಯವು ಅವನಲ್ಲಿ ಇದ್ದಿಲ್ಲ. ಬೇಗಮ್ ಸಾಹೇಬ, ಕ್ಷಮಿಸರಿ. ಮೃತಬಾದಶಹನ ನಿಂದೆ ಮಾಡುವೆನೆಂದು ಭಾವಿಸಬೇಡಿರಿ ಆಗ ನಾನು ನಿಮ್ಮ ಉತ್ಸಾಹ ಬಲದಿಂದಲೇ ಅಜಿಮಶಹನ ಸಂಗಡ ಶಸ್ತ್ರವೆತ್ತಿದ್ದೆನು; ಆದರೆ ಹತಭಾಗ್ಯ ಕಾಸೀಮನು ತನ್ನ ಪ್ರತಿಜ್ಞೆಯನ್ನು ನೆರವೇರಿಸಲು ಅಸಮರ್ಥನಾದನು"

"ಕಾಸೀಮ, ತಾಪಮಾಡಿಕೊಳ್ಳಬೇಡ; ಅದರಲ್ಲಿ ನಿನ್ನ ಅಪರಾಧವಿಲ್ಲ; ಮತ್ತು ಪ್ರಯತ್ನದ ಕೊರತೆಯಾಗಿಲ್ಲ ಎಲ್ಲ ಸಂಗತಿಯೂ ನನಗೆ ತಿಳಿದಿರುವದು. ದುರ್ದೈವವು ನನ್ನದು; ಮತ್ತು ಮುಸಲ್ಮಾನ ಸಮಾಜದ್ದು! ನಿನ್ನ ಪ್ರಯತ್ನವು ನಿಷ್ಫಲವಾಯಿತೆಂಬ ಲಜ್ಜೆಯಿಂದ ನೀನು ಈ ವರೆಗೂ ನನಗೆ ಮುಖ ತೋರಿಸಿಲ್ಲ. ನನ್ನ ಈ ಸುಡುಗಾಡು ಮುಖವನ್ನು ತೋರಿಸಲು ನಾನೂ ಪ್ರಯತ್ನ ಮಾಡಲಿಲ್ಲ. ಕಾಸೀಮ, ನಿನ್ನ ಮೇಲೆ ನನ್ನ ಪ್ರೇಮ-ಅಂತಃಕರಣಗಳು ಎಷ್ಟಿರುವವೆಂಬದು ನಿನಗೆ ಗೊತ್ತಿರುವದೇ?"

ಕಾಸೀಮ:"ಹೌದು!" ಎಂದನು.

ಬೇಗಮ:—ಕಾಸೀಮ, ನಾನು ಸಾಮ್ರಾಜ್ಞಿಯಾಗುವ ಆಶೆಯಿಂದಲೇ ನಿನಗೆ ಯುದ್ಧಮಾಡಲು ಪ್ರೋತ್ಸಾಹನ ಕೊಟ್ಟಿಲ್ಲ. ಈ ಘಾತಿಮಾ ಬೇಗಮಳು ಅಷ್ಟು ಸ್ವಾರ್ಥಪರಾಯಣಳೆಂದು ತಿಳಿಯಬೇಡ. ಜಾತಿಯ ಗೌರವವೇ ನನ್ನ ಹೇತುವು; ಆದರೆ ದೇವರೇ ಪ್ರತಿಕೂಲವಾದನು. ಹಿಂದೂ ಜನರ ಜಯಭೇರಿಯು ಬಾರಿಸಿತು. ನನ್ನ ಪತಿಯು ಮರಣ ಹೊಂದಿದನು. ನೀನೂ ಮೂರ್ಛಿತನಾಗಿ ಗೌಡಕ್ಕೆ ತಿರುಗಿ ಬಂದೆ; ಆದರೂ ನಾನು ಹತಾಶಳಾಗಲಿಲ್ಲ. ಮರಣದ ಕಡೆಯ ಶ್ವಾಸದ ವರೆಗೆ ಮೃತ್ಯುವಿನ ಕೂಡ ಯುದ್ಧ ಮಾಡಬೇಕಲ್ಲವೇ? ಆ ಪ್ರಕಾರ ನೀನು ಜೀವಂತನಿರುವಿ ಎಂಬದೊಂದೇ ಆಶೆಯು; ಮತ್ತೂ ಹೆಚ್ಚಿನ ಸುದೈವವೆಂದರೆ ಅಶಮಾನಳ ಕೋಣೆಯಲ್ಲಿ ಅವಳು ಸ್ವತಃ ಕಾಸೀಮನ ಉಪಚಾರ ಮಾಡುತ್ತಿದ್ದಳು. ಅಶಮಾನ್, ಅಹಹಾ! ಸುಂದರ ಅಶಮಾನಳ ಮೇಲೆಯೂ ನನ್ನ ಪ್ರೀತಿ ಬಹಳ. ಅಜೀಮನ ಮೇಲೆಯೂ ನನ್ನ ಮಮತೆ ಬಹಳ; ಆದರೆ ಅವನು ಹಿಂದೂಪಕ್ಷಪಾತಿಯು. ಅವನ ಶಿಕ್ಷಣದಲ್ಲಿದ್ದ ಅಶಮಾನಳೂ ಹಿಂದೂಪಕ್ಷಪಾತಿಯು. ಆಗಲಿ ಕಾಶೀಮ! ಅದರಲ್ಲಿಯೂ ನಿನ್ನ ಮೇಲೆ ಅಶಮಾನಳು ಅನುರಕ್ತಳಾದುದನ್ನು ನೋಡಿ ಒಂದು ಬಗೆಯಿಂದ ಸಮಾಧಾನ ಮಾಡಿಕೊಂಡೆನು; ಮತ್ತು ನೀನೂ ಅವಳ ಸೌಂದರ್ಯಕ್ಕೆ ಮೋಹಿತನಾದದ್ದು ಕಂಡುಬಂತು. ಅಶಮಾನಳ ರೂಪಭಾಂಡಾರವು ಅಕ್ಷಯ್ಯವಾದದ್ದು. ಇರಲಿ. ಮತ್ತೆ ನಮಗೆ ಅನುಕೂಲವಾದ ಗಾಳಿಯು ಬೀಸಹತ್ತಿತು. ರಾಜಾ ಗಣೇಶನಾರಾಯಣನು ಸಾಮ್ರಾಟನ ಪ್ರತಿನಿಧಿ ಎಂದು ಹಿಪ್ಪಿ ಕಾರಭಾರ ನಡಿಸ ಹತ್ತಿದನು; ಮತ್ತು ಅಶಮಾನಳ ವಿವಾಹವನ್ನು ನಿನ್ನ ಸಂಗಡ ಮಾಡುವದನ್ನು ನಿರ್ಧರಿಸಿದನು. ಇದರಿಂದ ನನ್ನ ಆಶೆಯು ದ್ವಿಗುಣಿತವಾಯಿತು; ಆದರೆ ಅಷ್ಟರಲ್ಲಿ ದಿಲ್ಲಿಯ ಬಾದಶಹನ ಸೈನ್ಯವು ಬಂದು ನೀನು ಯುದ್ಧಕ್ಕೆ ಹೋದಿ. ಇತ್ತ ಗಣೇಶನಾರಾಯಣನು ಮರಣ ಹೊಂದಿದನು. ನೀನು ವಿಜಯವನ್ನು ಹೊಂದಿ ತಿರುಗಿ ಬರುವದರೊಳಗೆ ಎಲ್ಲ ಪರಿಸ್ಥಿತಿಯೂ ವಿಪರೀತವು ಪುನಃ ಹಿಂದೂ-ಮುಸಲ್ಮಾನರ ನಡುವೆ ಅಪ್ರೀತಿಯು ಯದುನಾರಾಯಣನ ಪ್ರತಿನಿಧಿತ್ವಕ್ಕೆ ಮುಸಲ್ಮಾನರು ವಿರೋಧಿಗಳು. ನಿನ್ನ ಪ್ರಿಯ ಅಶಮಾನಳು ಯದುನಾರಾಯಣನ ಮೇಲೆ ಅನುರಕ್ತಳು. ಇಷ್ಟೇ ಅಲ್ಲ, ಅವರವರ ನಡುವೆ

ಮುತ್ತಿನಹಾರ-ಉಂಗುರಗಳ ಆದಾನ-ಪ್ರದಾನವು. ಇದು ಮುಸಲ್ಮಾನ ಸಮಾಜಕ್ಕೇ ಕಲಂಕ ಸ್ವರೂಪವು! ಕಾಶೀಮ, ನೀನು ಅವಳ ಮೇಲೆ ಅನಂತ ಉಪಕಾರವನ್ನು ಮಾಡಿದ್ದೆಯಲ್ಲವೆ? ಆ ಉಪಕಾರವನ್ನವಳು ಚನ್ನಾಗಿ ತೀರಿಸಿದಳು.

ಕಾಸೀಮ:—ತಾಯಿ, ಇದು ವ್ಯಕ್ತಿಸಂಬಂಧ ವಿಷಯವಾಯಿತು ಧರ್ಮ ಮತ್ತು ಸಮಾಜಗಳಿಗೇನು ಸಂಬಂಧವು? ಇದರಲ್ಲಿ ಸಮ್ರಾಟ ಜಲಾಲುದ್ದೀನ ಮತ್ತು ಅಶಮಾನತಾರಾ ಇವರಿಬ್ಬರಲ್ಲಿ ಯಾರ ಕಡೆಗೂ ದೋಷವಿಲ್ಲ. ಯದುನಾರಾಯಣನು ಮುಸಲ್ಮಾನ ಧರ್ಮದ ಪ್ರಕಾರ ಅಶಮಾನಳ ಸ್ವೀಕಾರ ಮಾಡಿರುವನು.

ಬೇಗಮ:—ಇದು ವ್ಯಕ್ತಿಗತವಾದರೂ ಇದರ ಪರಿಣಾಮವು ಸಮಾಜ ಮತ್ತು ಧರ್ಮದ ಮೇಲೆ ಆಗೇ ಆಗುವದು ಸಾಮಾನ್ಯವಾದ ಹಿಂದು ಸಂಸಾರದ ವಿಷಯವಾಗಿದ್ದರೆ ಚಿಂತೆಯಿದ್ದಿಲ್ಲ. ಇದು ಸಾಮ್ರಾಜ್ಯ ದೊಳಗಿನ ಅತಿ ಶ್ರೇಷ್ಠವಾದ ಹಿಂದು ಮನೆತನದ ವಿಷಯವು; ಮತ್ತು ಆ ಸಂಸಾರದ ವರ್ಚಸ್ಸು ಗೌಡದೇಶದ ಎಲ್ಲ ಮುಸಲ್ಮಾನ ಜನಾಂಗದ ಮೇಲೆ ಅಬಾಧಿತವಾಗಿ ನಡೆಯುತ್ತದೆ. ಇದಲ್ಲದೆ ಇದು ಹೃದಯಗಳ ವ್ಯಾಪಾರವು, ಹಿಂದು ಮನೆ ಮುರಿದು ಮತ್ತೊಂದು ಮನೆ ಕಟ್ಟುವದು ಸುಲಭವು. ಆದರೆ ಹಿಂದು ಹೃದಯವನ್ನು ನಾಶಮಾಡಿ ಅನ್ಯ ಹೃದಯ ವನ್ನು ನಿರ್ಮಾಣ ಮಾಡುವದು ಅಷ್ಟು ಸುಲಭವಲ್ಲ. ಕಾಶೀಮ, ನೀನು ಹಿಂದುಮುಂದಿನ ವಿಚಾರ ಮಾಡದೆ, ಭಾವನೆಯ ಭರದಲ್ಲಿ ನಿನ್ನ ಮುಂದೆ ಕೈಕಟ್ಟಿಕೊಂಡು ನಿಂತ ಸಾಮ್ರಾಜ್ಯ ಲಕ್ಷ್ಮಿಯನ್ನು ಅನಾದರ ಮಾಡಿ ಅನ್ಯರ ಪಾಲು ಮಾಡಿದೆ. ಇದೇನು ಸಣ್ಣ ಅಪರಾಧವೇ? ಅಪ್ರಬುದ್ಧಳಾದ ಅಶಮಾನಳು ಕಪಟಿಯಾದ ಯದುನಾರಾಯಣನ ಬಾಹ್ಯಸ್ವರೂಪಕ್ಕೆ ಮೋಸ ಹೋಗಿರುವಳು. ಅವನು ವ್ಯಭಿಚಾರ ಲಾಲಸೆಯಿಂದ ಮುಸ ಲ್ಮಾನ ಧರ್ಮ ಸ್ವೀಕರಿಸಿರುವನು. ಅನುಕೂಲ ವೇಳೆಯು ಬಂದಾಗ ಅವನು ತನ್ನ ಕೃತ್ರಿಮ ಆವರಣವನ್ನು ಬಿಸುಟಿ, ತನ್ನ ನಿಜ ರೂಪವನ್ನು ಧಾರಣ ಮಾಡುವನು. ಕಾಸೀಮ, ನೀನು ಬರೀ ಶೂರನಿರುವಿ; ಆದರೆ ರಾಜನೀತಿಜ್ಞನಲ್ಲ. ಸಿಟ್ಟಾಗ ಬೇಡ. ನಾನು ನಿನ್ನನ್ನು ಪುತ್ರನಂತೆ ಭಾವಿ ಸಿರುವೆನು. ತೇಜೋವಿಹೀನವಾಗಲು ಬಂದ ಮುಸಲ್ಮಾನ ಗೌರವವು

ನಿನ್ನಿಂದ ಉದ್ಧಾರವಾಗಬೇಕು. ನನ್ನ ರಣಶೂರ ಕಾಶೀಮ! ಇನ್ನಾದರೂ ಎಚ್ಚರಾಗು ಸುತ್ತಲಿನ ಪರಿಸ್ಥಿತಿಯು ನಿರೀಕ್ಷಣೆ ಮಾಡು ಅಪಾತ್ರರಲ್ಲಿ ವಿಶ್ವಾಸವಿಡಬೇಡ.

ಕಾಸೀಮ:—ಸಾಮ್ರಾಟನ ವಿಷಯುದಲ್ಲಿ ಮತ್ತೆ ಹಿಂದು ಹೊಸ ಯುದ್ಧವು ಆರಂಭವಾಗುವಂತೆ ತೋರುತ್ತದೆ. ಆ ವಿಷಯುದಲ್ಲಿ ನಾನು ಈಗಲೇ ಜಾಗೃತನಾಗುವೆನು ಸಿದ್ಧತೆ ಮಾಡಿಕೊಳ್ಳುವೆನು.

ಬೇಗಮ:—ನಿನ್ನ ಯಾವ ಸಿದ್ಧತೆಯೂ ಉಪಯೋಗಕ್ಕೆ ಬೀಳುವದಿಲ್ಲ. ನಿಮ್ಮ ಬಾದಶಹನು ಯಾವಾಗಲೂ ಅಶಮಾನಳ ವಿಲಾಸ ಮಂದಿರದಲ್ಲಿ ಸ-ರಿ-ಗ-ಮ ಎಂದು ಹಾಸ್ಯ ಸಂಗೀತಮಗ್ನನು. ಅವನಿಗೆ ಸಾಮ್ರಾಜ್ಯದ ಚಿಂತೆಯಲ್ಲಿ? ಸತ್ತರೆ ಮುಸಲ್ಮಾನರೇ ಸಾಯಲಿ. ಹಿಂದೂ ಸೈನ್ಯವು ನಿಮ್ಮನ್ನು ಆಕ್ರಮಿಸಿದಾಗ ನೀವು ಮೈಮರೆತು ಕೂತಿರಬೇಕು ನಿಮ್ಮ ಪ್ರೀತಿಯ ಬಾದಶಹನು ಹಿಂದೂ ಜನರಿಗೆ ಆತ್ಮಸಮರ್ಪಣೆ ಮಾಡಬೇಕು ಜಾಗೃತರಾದ ಹಲಕೆಲವು ಮಂದಿಗೆ ಮೋಕ್ಷ ದೊರೆಯಬೇಕು. ತಿಳಿಯಿತೇ? ಹಿಂದೂ ಜನರ ಕಪಟ ಶಾಸ್ತ್ರವನ್ನು ಕೇಳಿರುವಿಯಾ? ಹಿಂದುಗಳು ಮಸಲ್ಮಾನರಾಗಬಹುದು; ಆದರೆ ಮುಸಲ್ಮಾನರು ಹಿಂದುಗಳಾಗಲಿಕ್ಕೆ ಬರುವದಿಲ್ಲ.

ಕಾಸೀಮ:—ಹಾಗಲ್ಲ ಬೇಗಮಸಾಹೇಬ, ಮುಸಲ್ಮಾನರು ಹಿಂದುಗಳಾಗುವರು; ಆದರೆ ಬ್ರಾಹ್ಮಣರಾಗುವದಿಲ್ಲ ಅಂತ್ಯಜರಾಗುವರು.

ಬೇಗಮ:—ಹಾಗಾದರೆ ತೀರಿಹೋಯಿತು. ಯಾವ ಹಿಂದುವು ಮುಸಲ್ಮಾನನಾಗುವನೋ, ಆ ಮುಸಲ್ಮಾನನು ಪುನಃ ಹಿಂದುವಾಗಲಿಕ್ಕೇನು ತಡ? ಅವನು ಅಂತ್ಯಜ ಹಿಂದುವಾದರೂ ರಾಜ್ಯಸತ್ತೆ ಇರುವದರಿಂದ ಎಲ್ಲರೂ ಮಾನಕೊಡುವರು. ಇರಲಿ. ಕಾಸೀಮ, ಸದ್ಯದ ಯುದ್ಧದ ಹೇತುವೇನಿರಬಹುದು?

ಕಾಸೀಮ:—ಸಾತೋಡದ ರಾಜನಾದ ಅವನೀನಾಥನ ಪ್ರೇರಣೆಯಿಂದ ಈ ಯುದ್ಧವೆಂದು ಸುದ್ದಿ ಕೇಳಿರುವೆನು.

ಬೇಗಮ:—ನೋಡು, ವಿಚಾರ ಮಾಡು ಮಗನ ವಿರುದ್ಧವಾಗಿ ತಾಯಿಯು ಯುದ್ಧಮಾಡುವದು ಜಗತ್ತಿನ ಇತಿಹಾಸದಲ್ಲಿ ಇದೇ ಮೊದಲಿನದು. ಎಂಥ ವಿಚಿತ್ರವು!

ಕಾಸೀಮನಿಗೂ ಆಶ್ಚರ್ಯವೆನಿಸಿತು. ಅವನು ಮನಸ್ಸಿನಲ್ಲಿ:— ಸ್ನೇಹಮಯಿಯಾದ ತ್ರಿಪುರಾರಾಣಿಯು ಸ್ನೇಹಛಾಯೆಯಲ್ಲಿ ಹಿಂದೂ ಮುಸಲ್ಮಾನರು ಸಮಾನಾಧಿಕಾರಿಗಳು ಯದುನಾರಾಯಣನ ಧರ್ಮ ತ್ಯಾಗವು ಅವಳಿಗೆ ಮನೋವ್ಯಥೆಯನ್ನುಂಟುಮಾಡಿದರೂ ಇಂಥ ಪ್ರಬಲ ರಾಜ್ಯದ ಮೇಲೆ ದಂಡೆತ್ತಿಬರುವ ವಿಚಾರವನ್ನು ಹೇಗೆ ಮಾಡಿದಳು? ರಾಣಿಯು ತೇಜಸ್ವಿನಿಯಾದರೂ ಕುಮಾರನ ಅತುಲ ಪರಾಕ್ರಮವು ಅವ ಳಿಗೆ ಗೊತ್ತಿರುವದು. ನಂತರ ಪ್ರಕಾಶ್ಯವಾಗಿ:— ಬೇಗಮಸಾಹೇಬ, ಇದು ಅಭಿಮಾನದ ಯುದ್ಧವು. ಧರ್ಮತ್ಯಾಗಿಯಾದ ಪುತ್ರನ ಸಂಗಡ ಧರ್ಮಾಂಧ ಜನನಿಯು ಆಕ್ರಮಣವು. ಇದರಲ್ಲಿ ಹಿಂದೂ-ಮುಸಲ್ಮಾನ ಜಾತಿಯ ಸಂಬಂಧವಿಲ್ಲ

ಬೇಗಮ:—ಕಾಸೀಮ, ನಿನ್ನ ಸ್ವಭಾವದಲ್ಲಿ ಬಹಳೇ ಹೆಚ್ಚುಕಡಿಮೆ ಯಾಗಿರುವದು. ನಿನ್ನ ಮೊದಲಿನ ಸ್ವಾಭಿಮಾನವೆಲ್ಲಿ ಹೋಯಿತು? ಇದು ಗುಲಾಮಗಿರಿಯ ಫಲವು ಸ್ವಲ್ಪ ಅವಧಿಯಲ್ಲಿಯೇ ಈ ಗತಿಯು. ಕಾಸೀಮ, ರಾಣಿಯು ಮಗನಿಗೆ ಬುದ್ಧಿಗಲಿಸಲಿಕ್ಕೆ,-ಶಿಕ್ಷಿಸಲಿಕ್ಕೆ ಬರುವ ಳಲ್ಲವೆ? ನಿಮ್ಮ ಬಾದಶಹನು ಅವಳ ಬಗಲೊಳಗಿನ ಕೂಸಲ್ಲವೆ? ಅಂದ ಬಳಿಕ ಬಂದಿರಬಹುದು. ಎಂಥ ಮೂಢರು ನೀವು! ಅವಳು ಮಗನ ಸಿಂಹಾ ಸನವನ್ನು ದೃಢಮಾಡಲು ಬರುವಳು; ಮತ್ತು ನಿಮ್ಮ ಶೇಷ ಸ್ವಾಭಿ ಮಾನಕ್ಕೆ ಮಣ್ಣು ಕೊಟ್ಟು ಸಮಾಧಿ ಮಾಡಲಿಕ್ಕೆ ಬರುವಳು. ನೀವೆಲ್ಲರೂ ಷಂಢರಾದ ಬಳಿಕ ಅವರ ಕಡೆಗೇನು ಅಪರಾಧವು?

ಕಾಸೀಮನು ದೃಢ ಸ್ವರದಿಂದ:—ತಾಯಿ, ಈಗ ಹೊಳೆಯಿತು. ರಾಜನೀತಿಯು ಸರಳ ಮಾರ್ಗದಿಂದ ನಡೆದವರನ್ನೇ ಹಾಳು ಮಾಡುವದು. ಹಿಂದೂ ಜನರು ನಮ್ಮ ಸಂಗಡ ಎಷ್ಟೇ ಆತ್ಮೀಯ ಭಾವದಿಂದ ನಡೆ ಯಲಿ, ಅವರು ನಮ್ಮನ್ನು ಮುಂದೆ ಬರಗೊಡುವದಿಲ್ಲ. ಅವರ ಸರಳ ವೃತ್ತಿಯು ಕಪಟಪೂರ್ಣವು. ಸಾಮ್ರಾಟನ ಮುಸಲ್ಮಾನ ಧರ್ಮ ಸ್ವೀಕಾರವು ಮುಸಲ್ಮಾನರನ್ನು ಮಬ್ಬುಗೊಳಿಸಿ, ಹಿಂದೂ ಸಾಮ್ರಾಜ್ಯ ಸ್ಥಾಪನೆಯ ಸಲುವಾಗಿ!

ಬೇಗಮ:—ಅದು ಮುಖ್ಯ ಕಾರಣವು. ಇನ್ನು ಬೇರೆ ಉದ್ದೇಶ ವೆಂದರೆ, ಅಶಮಾನಳ ಮೇಲಿನ ಮೋಹವು. ಕಾಸೀಮ, ಪ್ರವೃತ್ತಿಯ

ದಾಸ್ಯತ್ವವು ಬಹು ಅನರ್ಥದ ಮೂಲ ಕಾರಣವು. ನೋಡು! ಎಂಥ ಸದ್ವಂಶದಲ್ಲಿ ಹುಟ್ಟಿದ ಆಶಮಾನಳು ಕಡೆಗೆ ಯಾವ ಸ್ಥಿತಿಗೆ ಬಂದಳು! ಕಡೆಗೆ ಒಬ್ಬ ಕಾಫರನ ದಾಸಿಯೇ? ಧಿಃಕಾರವು ಅವಳ ಜನ್ಮಕ್ಕೆ! ಈಗ ರಾಜನ ಅಂತಃಪುರಕ್ಕೂ ರಾಜಬೀದಿಯೊಳಗಿನ ವೇಶ್ಯಾಗೃಹಕ್ಕೂ ಏನೂ ಹೆಚ್ಚು ಕಡಿಮೆಯುಳಿದಿಲ್ಲ ಪ್ರತಿದಿವಸ ನಾಚು-ಗಾಯನಗಳು. ಸ್ವೇಚ್ಛಾಚಾರಕ್ಕೆ ಪ್ರತಿಬಂಧವಿಲ್ಲ. ಕಾಸೀಮ, ಇನ್ನು ನನ್ನಿಂದ ಅಲ್ಲಿರುವದು ಆಗುವದಿಲ್ಲ. ಅಂತಃಪುರಕ್ಕೆ ಹೋಗುವ ಮನಸ್ಸಿಲ್ಲ. ನೀನು ತಾಯಿಯ ಮರ್ಯಾದೆಯನ್ನು ರಕ್ಷಣ ಮಾಡುವಿಯೋ, ಇಲ್ಲವೋ? ಹೇಳು.

ಕಾಸೀಮ:—ಅಮ್ಮಾ, ಈಗ ನನಗೆ ಬಹಳ ಪಶ್ಚಾತ್ತಾಪವಾಗಿದೆ. ಇದು ನಿಮ್ಮ ಮನೆಯು, ಇಲ್ಲಿ ಬೇಕಾದಂತೆ ಇರಬಹುದು. ಈ ಸೇವಕನು ನಿಮ್ಮ ಹುಕುಮಿನ ದಾಸನು. ಮುಸಲ್ಮಾನ ಸಮಾಜದ ಈ ವಿಪತ್ತಿನ ಪ್ರಸಂಗದಲ್ಲಿ ನಿಮ್ಮಂಥ ಬುದ್ಧಿಮತಿಯಾದ ಬೇಗಮಳ ಉಪದೇಶದಂತೆ ನಡೆಯುವದೇ ವಿಹಿತವು ನೀವು ಇಲ್ಲಿಯೇ ಇದ್ದು, ನಮ್ಮನ್ನು ಜಾಗೃತೆಗೊಳಿಸಿರಿ. ಈ ಸೇವಕನು ಯಾವ ಕೊರತೆಯಾಗದಂತೆಯೂ ನಿಮ್ಮ ಸೇವೆಗೆ ಸಿದ್ಧನಿರುವನು.

ಅಂದಿನಿಂದ ನಸೆರಿತ್‌ಬೇಗಮಳು ಕಾಸೀಮನ ಹತ್ತರ ಕಿಲ್ಲೆಯಲ್ಲಿಯೇ ಇರಹತ್ತಿದಳು. ಅಲ್ಲಿ ಪ್ರತಿದಿನ ಹೊಸ ಹೊಸ ಆಲೋಚನೆಗಳು ನಡೆಯಹತ್ತಿದವು. ಎಲ್ಲರೂ ಕೂಡಿ ಹಿಂದುಗಳ ಗೌಡದ ಆಕ್ರಮಣವನ್ನು ನಿಷ್ಫಲ ಮಾಡುವ ಉದ್ಯೋಗಕ್ಕೆ ಸಿದ್ಧರಾದರು. ಅವರ ಈ ಕಾರಸ್ಥಾನವು ಒಂದೂ ಸೈನಿಕರಿಗೂ, ಅಧಿಕಾರಿಗಳಿಗೂ ತಿಳಿಯದಂತೆ ಜಾಗೃತವಾಗಿ ನಡಿಸಲ್ಪಟ್ಟಿತು.

ಕಾಸೀಮಖಾನನು ನಿಜವಾಗಿಯೂ ವಿದ್ರೋಹಿಯಾದನು!

---

## ೨

ಆಶಮಾನಳು ತನ್ನ ಪ್ರೀತಿಯ ಸಾರಂಗವನ್ನು ತೆಗೆದುಕೊಂಡು ಉದ್ಯಾನದಲ್ಲಿ ಬಾರಿಸುತ್ತ ಕುಳಿತ್ತಿದ್ದಳು. ಸಂಗೀತವು ಅವಳ ಹೃದಯ ದಲ್ಲಿಯ ಭಾವನೆಯ ಪ್ರತಿಬಿಂಬವು.

ರಾತ್ರಿಯ ಮೊದಲನೇ ಪ್ರಹರವು ಮುಗಿಯಲಿಕ್ಕೆ ಬಂದಿತ್ತು. ನಾಲ್ಕೂ ಕಡೆಗೆ ನಿಸ್ತಬ್ಧವು. ಸಾರಂಗದ ಮೃದುಮಧುರ ಸ್ವರವು ಆ ನಿಸ್ತಬ್ಧತೆಯ ಭಂಗಮಾಡಿ ಒಂದು ಪ್ರಕಾರದ ಭಾವನೋನ್ಮಾದವನ್ನು ಹುಟ್ಟಿಸಿತ್ತು. ಅಶಮಾನಳ ನಯನದ್ವಯಗಳು ಅಶ್ರುಭರಿತವು. ಮುಖವು ಆರಕ್ತಮಯವು. ನೋಡುವವರಿಗೆ ಮೋಹಕವು ಅವಳು ಕೆಲಹೊತ್ತಿನ ನಂತರ ಗಾನವನ್ನು ನಿಲ್ಲಿಸಿ, ಸಾರಂಗವನ್ನು ಬದಿಗಿಟ್ಟು, ಅಂಧಕಾರಮಯವಾದ ಉದ್ಯಾನದಲ್ಲಿ ಅಡ್ಡಾಡ ಹತ್ತಿದಳು ಅಷ್ಟರಲ್ಲಿ ಅವಳ ಹಿಂದಿನಿಂದ:—"ಅಶಮಾನ!" ಎಂಬ ಗಂಭೀರ ಸ್ವರವು ಕೇಳಬಂತು.

ಅಶಮಾನಳು ಚಮಕಿತಳಾಗಲಿಲ್ಲ; ಯಾಕಂದರೆ ಆ ಸ್ವರವು ಅವಳ ಚಿರಪರಿಚಿತವಾದದ್ದು; ಮತ್ತು ಅವಳು ಯಾರ ಧ್ಯಾನಪರವಶಳಾಗಿದ್ದಳೋ, ಅವರ ಸ್ವರವೇ ಅದು. ಅವಳು ಹಿಂದಕ್ಕೆ ತಿರುಗಿ ತನ್ನ ಕೋಮಲವಾದ ಕೈಗಳನ್ನು ಮುಂದಕ್ಕೆ ಚಾಚಿ ತನ್ನ ಹೃದಯೇಶ್ವರನ ಬೆರಳನ್ನು ಹಿಡಕೊಂಡು ಉತ್ಸುಕತೆಯಿಂದ:—"ಪ್ರಭೋ" ಎಂದಳು.

ಯದು:—ಅಶಮಾನ್! ಇದೇ ರೀತಿ ಭಾವನಾವಶಳಾಗಿ ಎಷ್ಟು ದಿನಗಳನ್ನು ಕಳೆಯುವಿ?

ಅಶ:—ನನ್ನ ಭಾವನಾವಶತೆಯನ್ನೇನು ನೋಡಿದಿರಿ?

ಯದು:—ನಿನ್ನ ಗಾಯನದ ಅಭಿಪ್ರಾಯವೇನು?

ಅಶ:—ನಿಮಗೆ ತಿಳಿಯದ ವಿಷಯವು ಅದಾವದಿರುವದು?

ಯದು:—"ನೀವು ಸರ್ವಸ್ವವನ್ನು ಕೊಟ್ಟಿರುವಿರಿ. ನನ್ನಿಂದ ಏನೂ ಕೊಡುವದಾಗುವದಿಲ್ಲ" ಇದು ಗಾಯನದ ತಾತ್ಪರ್ಯವು; ಆದರೆ ಪರಿಸ್ಥಿತಿಯು ಕೇವಲ ಇದರ ವಿಪರೀತವಿದ್ದು, ನೀನು ಉದಾರ ಮನಸ್ಕಳಾಗಿ ನನ್ನ ಅಪರಾಧವನ್ನು ಸ್ವೀಕರಿಸಿರುವಿ! ಅಶಮಾನ್! ನಾನು ನಿನ್ನ ಸರ್ವಸ್ವವನ್ನೂ ಅಪಹರಿಸಿ, ಅದಕ್ಕೆ ಪ್ರತಿಫಲವಾಗಿ ಸ್ವಲ್ಪ ಸಹ ಕೊಟ್ಟಿಲ್ಲ; ಮತ್ತು ಕೊಡಲುಸಮರ್ಥನಿಲ್ಲ. ಅಶಮಾನ! ನಾನು ಒಂದು ಪ್ರೇಮಮಯ ಸಾಮ್ರಾಜ್ಯದಿಂದ ಓಡಿ ಬಂದಿರುವೆನು. ಒಬ್ಬಳ ಸರ್ವಸ್ವವನ್ನು ಅಪಹರಿಸಿಕೊಂಡು ಬಂದಿರುವೆನು. ಅಂದಬಳಿಕ ಅವಳ ಸಲುವಾಗಿ ನನ್ನ ಕರ್ತವ್ಯವು ಏನೂ ಇಲ್ಲವೇನು? ನಾನು ವಿಶ್ವಾಸ ಘಾತುಕನೆ? ಹೃದಯಹೀನನೆ? ಇಲ್ಲ. ಹಾಗೆಂದಿಗೂ ಆಗೆನು. ನಾನು ಅವಳ ಸ್ವಾಮಿತ್ವವುಳ್ಳ ಸ್ವತ್ವನ್ನು ಪೂರ್ಣ

ಜಾಗರೂಕನಾಗಿ ರಕ್ಷಣ ಮಾಡಲೇ ಬೇಕಾಗಿರುವದು. ಈ ಜನ್ಮದಲ್ಲಿ ಆಗದಿದ್ದರೂ ಈ ಜೀವನಾಚೆಯ ಕಾಲದಲ್ಲಿ ಅವಳ ಸ್ವತ್ತನ್ನು ಬಡ್ಡಿಗೆ ಬಡ್ಡಿ ಕೂಡಿಸಿ ಅವಳಿಗೆ ಕೊಡಲೇಬೇಕಲ್ಲವೇ? ಅಂದಬಳಿಕ ಅಶಮಾನ್, ನಿನಗೇನು ಕೊಡಲಿ? ನಿನ್ನ ಸರ್ವಸ್ವವನ್ನು ಮಾತ್ರ ನೀನು ನನಗೆ ಅರ್ಪಿಸಿರುತ್ತೀ?

ಅಶಮಾನ:—ಹೃದಯೇಶ್ವರ, ಹಾಗೇಕೆ ನಿಮ್ಮನ್ನು ತಿರಸ್ಕರಿಸಿ ಕೊಳ್ಳುವಿರಿ? ನೀವು ಉದಾರರೆಂಬೇ ಆತ್ಮನಿಂದೆಯನ್ನು ಮಾಡಿಕೊಳ್ಳುವಿರಿ. ನೀವು ಈಗ ನನಗೆ ನನ್ನ ಯೋಗ್ಯತೆ ಮೀರಿ ಕೊಟ್ಟಿರುವಿರಿ. ನಿಮ್ಮ ವಿಶಾಲವಾದ ಹೃದಯ ಸಾಮ್ರಾಜ್ಯದಲ್ಲಿಯ ಒಂದು ಮೂಲೆಯಲ್ಲಿ ಆಶ್ರಯ ಕೊಟ್ಟಿರುವಿರಲ್ಲ! ಅದೇ ನನಗೆ ಸಾಮ್ರಾಜ್ಯವು. ಆ ಸಾಮ್ರಾಜ್ಯದ ಅಧೀಶ್ವರಿಯಾದ ನನಗೆ ಏತರ ಕೊರತೆ? ಸಾಧ್ವಿಯ ಹಕ್ಕಿನ ಧನದ ಆಶೆಯು ನನಗಿಲ್ಲ. ಆ ಧನವು ಹಾಗೆಯೇ ಜೋಪಾನದಿಂದ ಇರಲಿ; ಮತ್ತು ದಿನದಿನಕ್ಕೆ ವೃದ್ಧಿಯಾಗಲಿ ನನಗೆ ಅಸೂಯೆ ಇಲ್ಲ ಯಾರ ಪತಿಯು ದಾಂಪತ್ಯ ಪ್ರೇಮವೇ ಅಂತಿಮವೆಂದು ಭಾವಿಸದೆ ವಿಶ್ವಪ್ರೇಮ ವಿಭೋರನೋ, ಅಂಥವನ ಪತ್ನಿಯಾಗಿ ನನಗೆ ಅತೃಪ್ತಿಯೇ? ಇಲ್ಲ; ಅಷ್ಟು ಕಂಜೂಷಳು ನಾನಲ್ಲ ನಿಮ್ಮದು ಪ್ರೇಮಸಾಗರವು. ನಾನು ಆ ಪ್ರೇಮ ಸಿಂಧುವಿನೊಳಗಿಂದ ಒಂದು ಬೊಗಸೆ ಜಲದಾನಕ್ಕೆ ಮಾತ್ರ ಪಾತ್ರಳು.

ಯದು:—ಅಶಮಾನ, ನೀನು ಬರಬರುತ್ತ ಭಾವನೆಯ ಮೂರ್ತಿಯಾಗಹತ್ತಿದಿ. ನಿನ್ನ ಸಂಗೀತ, ಮಾತು, ಆಚಾರ-ವಿಚಾರಗಳೆಲ್ಲವೂ ಪವಿತ್ರಹೇತುಪೂರಿತವು ಅವು ನನ್ನ ಸಮಸ್ತಕ್ಲೇಶಗಳನ್ನೂ ದೂರ ಮಾಡುವವು. ನನ್ನ ಸಮಾಧಾನದ ಸ್ಥಳವೆಂದರೆ ನೀನೇ. ಕರ್ತವ್ಯ ಜರ್ಜರಿತನಾದ ನಾನು ಎಷ್ಟೋ ಸಾರೆ ನಿನ್ನ ಕಡೆಗೆ ಲಕ್ಷ್ಯವಿಟ್ಟು ನನ್ನ ಹೃದಯದ ಸಂಗಡ ಯುದ್ಧ ಮಾಡಿದೆನು. ಅಶಮಾನ್, ವಿಪತ್ತಿನ ಮೇಲೆ ವಿಪತ್ತುಗಳು. ನೀನು ಒಮ್ಮೆ ಆ ಭಾವನಾ ರಾಜ್ಯವನ್ನು ಬಿಟ್ಟು ಈ ಜಡಸೃಷ್ಟಿಗೆ ಬಾ; ನನಗೆ ದೊಡ್ಡ ಸಂಕಟವು ಬಂದಿರುತ್ತದೆ. ಅವ್ವನು ನನ್ನ ಸಂಗಡ ಯುದ್ಧಕ್ಕೆ ಬಂದಿರುತ್ತಾಳೆ.

ಅಶಮಾನಳು ಆಶ್ಚರ್ಯದಿಂದ:—ನಿಮ್ಮ ತಾಯಿಯೋ! ಇದೇನು?

ಯದು:— ಮಾತೆಯು ಬಹಳ ಅಭಿಮಾನಿಯು. ಆ ತೇಜಸ್ವಿನಿಯು, ಗೌಡದಲ್ಲಿ ಹಿಂದುಗಳೇ ಸ್ವಾಮಿತ್ವವನ್ನು ಅನುಭವಿಸಬೇಕೆಂಬಷ್ಟು

ಅವಳ ಅಪೇಕ್ಷೆಯು. ನಾನು ಅವಳ ಈ ಅಭಿಪ್ರಾಯವನ್ನು ಎಂದೂ ಸಮರ್ಥನೆ ಮಾಡಲಿಲ್ಲ; ಮತ್ತು ಅಂಥ ಅಮಿತ ಧೈರ್ಯಶಾಲಿನಿಯಾದ ತಾಯಿಯ ಸಂಪೂರ್ಣ ವಿರುದ್ಧವಾಗಿ ನಾನು ಈ ಕೆಲಸ ಮಾಡಿರುವೆನು. ಅಂದಬಳಿಕ ಅನರ್ಥಪಾತವಾಗಲಿಕ್ಕೇ ಬೇಕು. ಈಗ ಅವಳು ಈ ಕೃತಘ್ನ ಮಗನನ್ನು ದಂಡಿಸುವದಕ್ಕೆ ಬಂದಿರುವಳು.

ಅಕಮಾನ:—ನಿಮ್ಮ ಆಲೋಚನೆಯು ಏನಿರುವದು?

ಯದು:—ಈಗ ಮಗನ ಕರ್ತವ್ಯವನ್ನು ಮಾಡಿದರೆ ನಡೆಯುವಂತಿಲ್ಲ; ಗೌಡಸಾಮ್ರಾಟನ ಸಂಬಂಧದಿಂದಲೇ ಕರ್ತವ್ಯವನ್ನು ಮಾಡಬೇಕಾಗುತ್ತದೆ.

ಅಕ:—ಹಾಗಾದರೆ ಯುದ್ಧವನ್ನು ಮಾಡುವ ಅಭಿಪ್ರಾಯವೇನು?

ಯದು:—ಅದೇ ವಿಚಾರವನ್ನು ಮಾಡುತ್ತಿರುವೆನು.

ಅಕ:—ಇದರಲ್ಲಿ ವಿಚಾರವೇನು? ತಾಯಿಯ ವಿರುದ್ಧವಾಗಿ ಮಗನು ಯುದ್ಧ ಮಾಡುವದು ನೀತಿಗೆ ಒಪ್ಪುವದೇ?

ಯದು:—ಇಲ್ಲಿ ನೀತಿಗೆ ಅನುಸರಿಸಿ ಯಾವದಿರುವದು? ಮಗನ ಮೇಲೆ ತಾಯಿಯು ದಂಡೆತ್ತಿ ಬರುವದು ನೀತಿಯೇನು? ಅಂದಬಳಿಕ ಪ್ರತಿರೋಧವನ್ನು ಮಾಡಲೇಬೇಕಲ್ಲವೆ?

ಅಕ:— ಹಾಗಾದರೆ, ತಾಯಿ ಮತ್ತು ಮಕ್ಕಳು ಎನ್ನುವ ಬಗೆಹೇಗೆ?

ಯದು:—ಅಕಮಾನ, ತಾಯಿಯ ಅಭಿಪ್ರಾಯವು ನನ್ನ ವಿಷಯದಲ್ಲಿ ಏನಿರುವದು ಗೊತ್ತದೆಯೋ? ಅವಳು ಕೂಡಿದ ದರಬಾರದಲ್ಲಿ ತನ್ನ ಪಾಲಿಗೆ ನಾನು ಮೃತನೆಂದು ಭಾವಿಸಿರುವದಾಗಿ ಹೇಳಿರುವಳು.

ಅಕಮಾನ:—ತಾಯಿಯು ಸಾವಿರ ಸಾರೆ ಅನ್ನಲಿ; ಅದು ಆಶೀರ್ವಾದವು. ತಾಯಿಯು ಅಭಿಮಾನದ ಭರದಲ್ಲಿ ಕಠಿಣ ಮಾತುಗಳನ್ನು ಆಡಿದರೂ ನೀವು ಬೇರೆ ಭಾವಿಸಿ, ತಾಯಿಯ ಅವಮಾನಗೊಳಿಸಬಾರದು. ಮಾತೃಪ್ರೇಮವು ಅಕ್ಷಯ್ಯವಾದದ್ದು. ಸದ್ಯದ ಈ ಮಾತಾ-ಪುತ್ರರ ಯುದ್ಧವು ಈ ದುರ್ದೈವಿಯಾದ, ಮಾತೃಹೀನನಾದ ನನ್ನ ಉದ್ದೇಶವಾಗಿಯಲ್ಲವೇ? ಅಂದಬಳಿಕ ನಾನು ಯುದ್ಧಮಾಡಗೊಡಲಾರೆನು. ನೀವು ಸಾಮ್ರಾಟರೆಂದು ತಿಳಿದು, ತಾಯಿಯ ಸಂಗಡ ಯುದ್ಧಕ್ಕೆ ನಿಂತರೆ, ಜನರು ನಿಮಗೆ ಏನು ಅನ್ನುವರು ಬಲ್ಲಿರಾ? "ಹಿಂದೂದ್ವೇಷಿಯಾದ ಮುಸಲ್ಮಾನ

ಬಾದಶಹನು ಹಿಂದೂಜಾತಿಯ ನಾಶಕ್ಕೆ ಬದ್ಧಕಂಕಣನಾಗಿರುವನು.'' ನೀವು ಮೊದಲೇ ಹಿಂದೂಜನರ ವಿಶ್ವಾಸವನ್ನು ಕಳೆದುಕೊಂಡಿರುವಿರಿ. ನಿಮ್ಮ ಉದ್ದೇಶವು ಯೋಗ್ಯವಿದ್ದರೂ ಕೂಡ ಅದು ವಿಪರೀತವಾಗಿ ಪರಿಣಮಿಸುವದು. ನಿಮ್ಮ ಪ್ರಬಲ ಸೈನ್ಯದ ಮುಂದೆ ಸಾತೋಡ-ಭಾದುಡೀ ಸೈನ್ಯವು ಎಷ್ಟು ಹೊತ್ತು ನಿಲ್ಲುವದು? ಮೇಲಾಗಿ ತೇಜಸ್ವಿಯಾದ ತ್ರಿಪುರಾ ರಾಣಿಯ ಉತ್ಸಾಹವಾಣಿಯಿಂದ ಹಿಂದೂ ಸೈನ್ಯವು ಜೀವದ ಮೇಲೆ ಉದಾರವಾಗಿ ಯುದ್ಧಮಾಡುವದು. ನಾಥ, ಮುಂದಿನ ಅನರ್ಥ ಪ್ರಸಂಗದ ವಿಚಾರವನ್ನೇ ಮಾಡೆನು. ಹಿಂದೂಜಾತಿಯ ಗೌರವವು ಹಿಂದೂ ಬಾದಶಹನಿಂದ ಚೂರ್ಣವಾಗಿ, ತಮ್ಮ ಪವಿತ್ರ ನಾಮದ ಹಿಂದೆ ಮಾತೃ ಘಾತುಕಿ, ಸ್ವಧರ್ಮದ್ರೋಹಿ, ಸ್ವಜಾತಿನಾಶಕ ಎಂಬ ವಿಶೇಷಣಗಳು! ಆದ್ದರಿಂದ ಪ್ರಸ್ತುತ ಪ್ರಸಂಗದಲ್ಲಿ ಯುದ್ಧವೇ ಬೇಡ.

ಯದುನಾರಾಯಣನು ನಗುತ್ತ:—ಪ್ರಿಯೇ, ಹಾಗಾದರೆ ನಾನು ಈಗ ಏನು ಮಾಡಬೇಕು? ಕರ್ತವ್ಯಕರ್ಮವನ್ನು ಬಿಟ್ಟು ಮೂಢಬಾಲಕನಂತೆ ಸುಮ್ಮನೆ ಕೂಡಬೇಕೆ? ತಾಯಿಯು ನನ್ನ ಅಪರಾಧವನ್ನು ಬಾಲಕನ ಅಪರಾಧದಂತೆ ಭಾವಿಸಿ, ಪ್ರೇಮಪೂರ್ವಕವಾಗಿ ಹಿಂದು ಹೊಡೆತವನ್ನು ಕೊಟ್ಟು ತಿರುಗಿ ಬಗಲಲ್ಲಿ ಕುಳ್ಳಿರಿಸಿಕೊಂಡು ರಮಿಸುವಳೆಂದು ಭಾವಿಸಿರುವಿಯೇನು? ಅಸಮಾನ, ನಮ್ಮ ತಾಯಿಯು ಬಹು ಧರ್ಮಾಭಿಮಾನಿ. ಅತಿ ಕಠೋರಳು. ಅವಳ ವಿಷಯದಲ್ಲಿ ನನ್ನ ಅಪರಾಧಕ್ಕೆ ಪ್ರಾಯಶ್ಚಿತ್ತ ವಿಲ್ಲ ಇನ್ನು ನಾನು ಯುದ್ಧವನ್ನು ಬಿಟ್ಟರೆ ಮುಸಲ್ಮಾನ ಸಮಾಜವು ಸಂದೇಹಪಟ್ಟು ಈ ವರೆಗೆ ನಾನು ಮಾಡಿದ ಪ್ರಯತ್ನವು ನಿಷ್ಫಲವಾಗುವದು. ನಾನು ಕಪಟಿಯೆಂದೂ, ಹಿಂದೂಧರ್ಮಪಕ್ಷಪಾತಿಯೆಂದೂ ಅಪವಾದ ಬರುವದು. ಪ್ರಯತ್ನ ಪೂರ್ವಕವಾಗಿ ಸಂಪಾದಿಸಿದ ಕಾಸೀಮನ ಆದರವು, ಇಮ್ಮಡಿಯಾದ ದ್ವೇಷರೂಪವನ್ನು ಹೊಂದುವದು. ಹಿಂದು ವೇಳೆ ನಾನು ಮುಸಲ್ಮಾನ ಸಮಾಜವನ್ನು ಶಾಂತಗೊಳಿಸಿದೆನೆಂದು ಭಾವಿಸು. ಮುಂದೇನಾಗುವದೆಂಬದನ್ನು ಬಲ್ಲೆಯಾ? ಭಾದುಡಿಯ ಹಿಂದೂ ಸೈನ್ಯವು ಪ್ರತಿಬಂಧವಿಲ್ಲದ ಹಳ್ಳದ ನೀರಿನಂತೆ ಗೌಡವನ್ನು ಧ್ವಂಸ ಮಾಡುವದು. ಇಷ್ಟರಿಂದ ತಾಯಿಯು ಶಾಂತಳಾಗುವದಿಲ್ಲ. ಅವಳ ಮುಖ್ಯ ಭೇಟಿಯು ನಾನು. ನನ್ನ ಸಲುವಾಗಿ ನೀನು............ಯದುನಾರಾ

ಯಣನ ಕಂಠವು ಬಿಗಿಯಿತು; ಮತ್ತೆ ಅವನು:—ಅಕಮಾನ್, ತಾಯಿಯ ಕೋಪವು ಶಾಂತವಾಗಬೇಕಾದರೆ, ನನ್ನ ಮತ್ತು ನಿನ್ನ ಅಸ್ತಿತ್ವವು ಈ ಜಗತ್ತಿನಲ್ಲಿ ಇಲ್ಲದಂತೆ ಆಗಬೇಕು. ಅಕಮಾನ, ಈಗ ತಾಯಿಯ ಕೋಪವು ಜಾಹ್ನವಿಯ ಕ್ಷೋಭದಂತೆ ಇರುವದು. ಕಾರಣ ಆ ಪುಣ್ಯಸಲಿಲವು ಸ್ಥಿರಗಂಭೀರವಾಗುವ ಸಮಯವನ್ನು ಸಾಧಿಸುತ್ತ ಕುಳಿತು, ಆ ನಂತರ ನಾವು ಅಲ್ಲಿ ಮಿಂದು ಸಮಾಧಾನ ಹೊಂದಬೇಕು.

ಅಕಮಾನ:—ಹಾಗಾದರೆ ಈ ಸೌಭಾಗ್ಯವತಿಯ ಹೃದಯಸಮ್ರಾಟರು ಯಾವ ಮಾರ್ಗವನ್ನು ನಿರ್ಧರಿಸುವರು?

ಯದು:—ಪ್ರಿಯೇ, ನಿನ್ನಂತೆಯೇ ನನ್ನ ವಿಚಾರವೂ ಇರುವದು. ಈ ಪ್ರಸಂಗದಲ್ಲಿ ಬಾಹುಬಲವು ವ್ಯರ್ಥವು. ಈ ಯುದ್ಧವನ್ನು ಅಂತಃಕರಣದಿಂದಲೇ ಜಯಿಸತಕ್ಕದ್ದು. ನಾನು ನಾಳೆಗೇ ಊರಲ್ಲಿ ಹೀಗೆ ಡಂಗುರ ಹೊಡಿಸುತ್ತೇನೆ:— ಸಮ್ರಾಟನ ಜನನಿಯು ಬರುವಳು; ಸ್ವರ್ಗೀಯ ಗೌಡ ಪ್ರತಿನಿಧಿಯ ಪತ್ನಿಯು ಬರುವಳು. ಕಾರಣ ಎಲ್ಲರೂ ನೂತನ ವಸ್ತ್ರಾಭರಣಗಳಿಂದ ಭೂಷಿತರಾಗಿ ಅವಳನ್ನು ಎದುಗೊಂಡು ಬರತಕ್ಕದ್ದು. ರಾಜಧಾನಿಯ ಎಲ್ಲ ಮಾರ್ಗಗಳೂ ಗುಡಿ-ತೋರಣಗಳಿಂದ ಶೃಂಗರಿಸಲ್ಪಡತಕ್ಕದ್ದು. ಪ್ರತಿಯೊಂದು ತೋರಣದಲ್ಲಿ ನೌಬತ್ತು ಬಾರಿಸತಕ್ಕದ್ದು. ಕರ್ಪೂರ, ಚಂದನ, ಅಗರು, ಲೋಭಾನ ಮೊದಲಾದವುಗಳ ಸುವಾಸನೆಯಿಂದ ಗೌಡದ ವಾತಾವರಣವು ಸುಗಂಧಮಯವಾಗಿ ಹೋಗಲಿ. ಬ್ರಾಹ್ಮಣರು, ವೈಶಾಲವಿಗಳು, ಸೆಟ್ಟರು, ಸಾವುಕಾರರು ಎಲ್ಲರೂ ಹೋಗಿ ತಾಯಿಯನ್ನು ಎದುಗೊಂಡು ಬರತಕ್ಕದ್ದು. ಗೌಡ ದೇಶದ ಸಮಸ್ತ ಹಿಂದೂಸೈನ್ಯವು ನಿಶ್ಶಸ್ತ್ರವಾಗಿ ಮಾತೃಸೈನ್ಯವನ್ನು ಎದುಗೊಂಡು ಬರತಕ್ಕದ್ದು. ಮುಸಲ್ಮಾನ ಸೈನ್ಯವು ದುರ್ಗರಕ್ಷಣೆಯ ಕಾರ್ಯವನ್ನು ಮಾಡತಕ್ಕದ್ದು. ನಗರದಲ್ಲಿ ತಾಯಿಯ ಆಗಮನದ ಮೊದಲು ಹಿಂದು ವಾರದ ವರೆಗೆ ಎಲ್ಲರೂ ಆನಂದೋತ್ಸವಗಳನ್ನು ಮಾಡತಕ್ಕದ್ದು. ದರಿದ್ರರಿಗೂ, ಭಿಕ್ಷುಕರಿಗೂ ಇಚ್ಛಿತ ವಸ್ತುಗಳನ್ನು ಕೊಡತಕ್ಕದ್ದು. ಯಾರ ಇಚ್ಛೆಯೂ ಅಪೂರ್ಣವಾಗಬಾರದು. ತಾಯಿಯನ್ನು ಇಳಿಸತಕ್ಕ ಗೃಹವನ್ನು ನಿರ್ಮಲ ಗಂಗೋದಕದಿಂದ ಸಾರಿಸಿಡತಕ್ಕದ್ದು. ನಿಷ್ಠಾವತಿಯರಾದ ಬ್ರಾಹ್ಮಣಕುಮಾರಿಯರು ತಾಯಿಯ

ಸೇವೆಗ ಸಿದ್ಧರಾಗತಕ್ಕದ್ದು. ಅಶಮಾನ ನಮ್ಮ ತಾಯಿಯು ಮುಸಲ್ಮಾನರ ಮೇಲೆ ಇನ್ನೂ ಅವಿಶ್ವಾಸವ ತಾಳಿಲ್ಲ ಯಾಕಂದರೆ, ತನ್ನ ನಗರವನ್ನು ಮುಸಲ್ಮಾನ ಸೈನಿಕರಿಗೊಪ್ಪಿಸಿ, ಹಿಂದೂಸೈನ್ಯವನ್ನು ತಕ್ಕೊಂಡು ಬಂದಿರುವಳು. ನಮ್ಮ ಸೈನಿಕರೂ ಅವರನ್ನು ಕಂಡಕೂಡಲೆ ಸಹೋದರರಂತೆ ಆಲಿಂಗಿಸಿ ಕರೆದುಕೊಂಡು ಬರತಕ್ಕದ್ದು.

ಅಶಮಾನ:—ಪ್ರಭೋ. ನಾವು ಈ ಸುಂದರ ನೋಟವನ್ನು ಎಲ್ಲಿ ಕುಳಿತು ನೋಡಬಹುದು?

ಯದು:—ನಾವು ಅದನ್ನು ಕೋಟೆಯೊಳಗಿನ ಎತ್ತರವಾದ ಸ್ಥಳದ ಮೇಲಿಂದ ನೋಡುವಾ.

ಅಶಮಾನ:—ಕಿಲ್ಲೆಯೊಳಗಿಂದಲೇ?

ಯದು:—ಹೌದು! ನಾನು ತಾಯಿಯ ಹೆದರಿಕೆಯಿಂದ ದುರ್ಗದಲ್ಲಿ ಆಶ್ರಯಹೊಂದಬೇಕಾಗಿದೆ. ಅದರ ಹೊರ್ತು ಅನ್ಯ ನಿರಾಪದ ಸ್ಥಳವೆಲ್ಲಿ?

ಅಶಮಾನ:—ದುರ್ಗದಲ್ಲಿ ಕಾಶೀಮಖಾನನಿರುವನಲ್ಲ?

ಯದು:— ಅಷ್ಟೇಕೆ ಭಯಪಡುವಿ?

ಅಶಮಾನ:—ಬೇಡ; ಕಾಶೀಮನ ಸ್ವಾಧೀನಕ್ಕೆ ಹೋಗುವದು ಬೇಡ. ಬೇರೆ ಸ್ಥಳವನ್ನು ನೋಡಿರಿ.

ಯದು:— ಪ್ರಿಯೇ, ಕಾಶೀಮನು ವೀರನು; ಸುಗುಣಿಯು. ಇಷ್ಟೇಕೆ ಭಯಪಡುವಿ?

ಅಶಮಾನ:—ಎಲ್ಲವೂ ನಿಜ; ಆದರೆ ಅವನು ನನ್ನ ಶತ್ರುವು. ಹಿಮ್ಮೆ ನನ್ನಿಂದ ಭಗ್ನಮನೋರಥವಾಗಿರುವನು.

ಯದುನಾರಾಯಣನ ಕುತೂಹಲವು ದ್ವಿಗುಣಿತವಾಯಿತು. ಅವನು:- ಏನು, ಭಗ್ನಮನೋರಥನೆ? ಅದು ಹೇಗೆ? ಎಲ್ಲವನ್ನೂ ಸ್ಪಷ್ಟವಾಗಿ ಹೇಳು, ಎಂದನು. ಆಗ ಅಶಮಾನಳು ಎಲ್ಲ ಸಂಗತಿಯನ್ನೂ ಹೇಳಿದಳು. ಯದುನಾರಾಯಣನು ವಿಷಾದದಿಂದ:—ಈ ವರೆಗೆ ನನಗೇಕೆ ಹೇಳಿದ್ದಿಲ್ಲ? ಇರಲಿ. ಈಗ ಬೇರೆ ವಿಚಾರ ಮಾಡಲಿಕ್ಕೆ ಅವಕಾಶವಿಲ್ಲ. ನಾನು ಇನ್ನು ದುರ್ಗಕ್ಕೆ ಹೋಗಲೇ ಬೇಕಾಗಿದೆ.

ಅಶಮಾನ:—ಏನು? ಇಂದೇ-ಈ ರಾತ್ರಿಯಲ್ಲಿಯೇ ಹೋಗುವಿರಾ?

ಯದು:—ಹೌದು. ಈಗಲೆ ಹೋಗಬೇಕಾಗಿದೆ. ನಸರಿಂತ ಬೇಗ

ಮಳೂ ದುರ್ಗದಲ್ಲಿ ಹೋಗಿದ್ದು, ಏನಾದರೂ ಕಾರಸ್ಥಾನವಿದ್ದರೆ, ಈ ಮಧ್ಯರಾತ್ರಿಯಲ್ಲೇ ನಡೆದಿರಬಹುದು ಕಾಶೀಮನು ಶೂರನಾದರೂ ಅವನ ಹಿಂದೂದ್ವೇಷವು ಇನ್ನೂ ಪೂರ್ಣವಾಗಿ ಅಳಿದಿಲ್ಲ. ಅದನ್ನು ಈಗಲೇ ನಾಶಪಡಿಸದಿದ್ದರೆ, ಅದು ಪ್ರಜ್ವಲಿಸಿ ನಮ್ಮ ಈ ಹಿಂದೂ-ಮುಸಲ್ಮಾನರ ಐಕ್ಯದ ಇಮಾರತಿಯನ್ನು ಭಸ್ಮಮಾಡಿ ಬಿಡುವದು. ಹಿಳ್ಳೇದು. ಅಶವಾನ್, ಈಗ ನಾನು ತಡಮಾಡುವಂತಿಲ್ಲ ಹೋಗಿ ಬರುತ್ತೇನೆ. ನಾನು ಬರುವದು ವಿಲಂಬವಾದರೆ, ನೀನು ಸ್ವತಃ ದುರ್ಗಕ್ಕೆ ಬಾ. ಮುಂದೆ ಹೋಗಿ ಎಲ್ಲ ವ್ಯವಸ್ಥೆಯನ್ನೂ ಮಾಡಿಡುವೆನು, ಎಂದೆಂದು ಹೊರಟನು.

— —

೩

ಮಧ್ಯರಾತ್ರಿಯ ಸಮಯವು ಗೌಡರಾಜ್ಯದ ಹಿಂದೂಸೈನಿಕರು ನೃತ್ಯ-ಗೀತ-ಆಟ-ನೋಟ ಮೊದಲಾದ ವಿಲಾಸಗಳಲ್ಲಿ ಮಗ್ನರಾಗಿರುವರು. ಇಂದು ಸೇನಾಪತಿಯಾದ ಕಾಸೀಮಖಾನನು ದಿಲ್ಲೀ ಸೈನ್ಯದ ಪೂರ್ವದ ವಿಜಯವನ್ನು ಸ್ಮರಿಸಿ, ಹಿಂದೂಸೈನಿಕರಿಗೆ ಪೂರ್ಣ ವಿಶ್ರಾಂತಿಯನ್ನು ಕೊಟ್ಟಿದ್ದನು ಕೆಲವು ಹಿಂದೂ ಅಧಿಕಾರಿಗಳಿಗೆ ಮೊದಲು ಇದು ವಿಚಿತ್ರವೆನಿಸಿದರೂ ಶಾಂತತಾಪೂರ್ಣ ಪರಿಸ್ಥಿತಿಯಲ್ಲಿ ದುಷ್ಟ ವಿಚಾರಕ್ಕೆ ಆಸ್ಪದವಾಗಲಿಲ್ಲ. ಈ ಮೊದಲು ಸೇನಾಪತಿಯಾದ ಕಾಸೀಮಖಾನನು ಹಿಂದೂ-ಮುಸಲ್ಮಾನ ಸೈನ್ಯದ ವಸತಿಸ್ಥಾನಗಳನ್ನು ಬೇರೆ ಬೇರೆ ಮಾಡಿ, ಹಿಂದೂ ಸೈನಿಕರ ಶಸ್ತ್ರಾಸ್ತ್ರಗಳನ್ನು ಕೌಶಲ್ಯದಿಂದ ತನ್ನ ಸ್ವಾಧೀನ ಪಡಿಸಿಕೊಂಡಿದ್ದನು; ಮತ್ತು, ಶಸ್ತ್ರಾಗಾರದ ಮೇಲೆ ತನ್ನ ವಿಶ್ವಾಸುಕ ಮುಸಲ್ಮಾನ ಅಧಿಕಾರಿಗಳನ್ನು ನಿಯಮಿಸಿದ್ದನು ಇಂದಿನ ಉತ್ಸವದ ವಿಚಾರವೂ ಸಹ ಹಿಂದು ಬಗೆಯ ಆ ಕಾರಸ್ಥಾನದ ಫಲವೇ ಆಗಿದ್ದಿತು.

ಕಾಸೀಮಖಾನನು ತನ್ನ ಕೋಣೆಯಲ್ಲಿ ಒಬ್ಬನೇ ವಿಚಾರಕ್ರಾಂತನಾಗಿ ಕುಳಿತಿದ್ದನು. ಮಧ್ಯರಾತ್ರಿಯು ಮೀರುತ್ತ ಬಂದಿದ್ದರೂ ಅವನಿಗೆ ನಿದ್ರೆಯು ಬರಲೊಲ್ಲದು. ಅಷ್ಟರಲ್ಲಿ ಅಕಸ್ಮಾತ್ತಾಗಿ ನಸೀರತ್‌ಬೇಗಮಳು ಅಲ್ಲಿಗೆ ಬರಲು, ಕಾಸೀಮನು ಎದ್ದು ಮರ್ಯಾದೆಯಿಂದ ಅವಳನ್ನು ಸನ್ಮಾನಿಸಿದನು. ಆಗ ನಸೀರಿತ್‌ಬೇಗಮಳು:—ಕಾಸೀಮ! "ಮುಸಲ್ಮಾನ ಧರ್ಮ ಸ್ವೀಕರಿಸಿದ ನಿಮ್ಮ ಆ ಹಿಂದೂ ಬಾದಶಹನು ಮುಸಲ್ಮಾನ

ರಾಜ್ಯದ ಸಲುವಾಗಿ ಎಷ್ಟು ದಕ್ಷನಿರುವನೆಂಬದು ಈಗಲಾದರೂ ತಿಳಿಯಿತೇ?" ಎಂದಳು.

ಕಾಸೀಮ:—ಅಮ್ಮಾ, ಇನ್ನು ಈ ಕಾಸೀಮನು ಆ ಮುಸಲ್ಮಾನವೇಷಧಾರಿಯಾದ ಹಿಂದೂ ಬಾದಶಹನ ಮೇಲೆ ಎಂದಿಗೆ ನಂಬಿಗೆಯನ್ನಿಟ್ಟಾನು? ನನ್ನ ಭ್ರಾಂತಿಯು ದೂರವಾಗಿದೆ. ಅಮ್ಮಾ, ಮುಸಲ್ಮಾನ ಸಮಾಜವು ಮಾಯೆಯಿಂದ ಮೋಹಗೊಂಡು ಅಂಧವಾಗಿದ್ದು, ತಮ್ಮ ಅಂಜನದಿಂದಲೇ ಪೂರ್ಣ ಜಾಗೃತವಾಗಿರುವದು.

ನಸೆರಿತ್‌ಬೇಗಮ:—ಎಲ್ಲವೂ ನಿಜವು; ಆದರೆ ಭಾದುಡಿಯ ಹಿಂದೂ ಸೈನ್ಯವು ನಿಮ್ಮ ಮೇಲೆ ದಂಡೆತ್ತಿ ಹೊರಟದ್ದು, ಅರ್ಧ ದಾರಿಯ ಮೇಲೆ ಬಂದಿರಬಹುದು. ಮುಂದೇನು ವಿಚಾರವು?

ಕಾಸೀಮ:—ಇಂದು ಬೆಳಗಾಗುವದರೊಳಗೆ ಮುನೀಮಖಾನನ ಸಂಗಡ ಸೈನ್ಯವನ್ನು ಕಳಿಸುವ ವ್ಯವಸ್ಥೆ ಮಾಡಿದ್ದೇನೆ ಬೆಳಗಾಗುವಷ್ಟರಲ್ಲಿ ಸೈನ್ಯವು ರಾಜಧಾನಿಯಿಂದ ಬಹು ದೂರ ಹೋಗುವಂತೆ ವ್ಯವಸ್ಥೆ ಮಾಡಿರುವೆನು.

ನಸೆರಿತ್‌ಬೇಗಮ:—ಹಾಗಾದರೆ ಹಿಂದೂಜನರ ಈ ಉತ್ಸವವು ನಿಮ್ಮ ಕೌಶಲ್ಯದ ಒಂದು ಭಾಗವಿರಬಹುದಲ್ಲವೆ?

ಕಾಸೀಮ:—ಹೌದು.

ನಸೆರಿತ್‌ಬೇಗಮ:—ಹೌದು ಕಾಸೀಮ. ಕಳೆದುಕೊಂಡ ಸಾಮ್ರಾಜ್ಯವನ್ನು ಛಲದಿಂದಲೂ, ಕೌಶಲ್ಯದಿಂದಲೂ ಸಂಪಾದಿಸಬೇಕಾಗಿದೆ. ಇರಲಿ. ಆ ಮುಖ್ಯ ವಿಷಯದ ವಿಚಾರವೇನು?

ಕಾಸೀಮ:—ನಾಳಿನ ದರಬಾರದಲ್ಲಿ ಸಾಮ್ರಾಟನ ಅಭಿಪ್ರಾಯವನ್ನು ತಿಳಕೊಂಡು ಏನಾದರೊಂದು ನಿರ್ಧಾರ ಮಾಡಬೇಕಾಗಿದೆ.

ನಸೆರಿತ ಬೇ:—(ತಿರಸ್ಕಾರದಿಂದ) ಆ ದರಬಾರವೇ ನಿಮ್ಮ ಅವನತಿಯನ್ನು ಮಾಡಿದೆ. ಮಾತುಮಾತಿಗೆ ದರಬಾರ-ದರಬಾರ! ಮುಸಲ್ಮಾನರ ಮಂಗಲಾಪೇಕ್ಷೆಯು ಆ ದರಬಾರದಲ್ಲಿ ದೊರೆಯುವದೆಂದು ನಂಬಿರುವಿರೇನು? ನಿಮ್ಮ ಧರ್ಮದ್ವೇಷಿಯ ಹತ್ತಿರ ನೀವು ಧರ್ಮೋಪದೇಶ ಕೇಳುವಿರಾ? ಅಪರಾಧಿಯೇ ನ್ಯಾಯಾಧೀಶನಾಗಿರುವಲ್ಲಿ ಅವನು ಅಪರಾಧದ ವಿಚಾರಣೆ ಮಾಡುವದೇನು? ಕಾಸೀಮ-ಭ್ರಾಂತ ಕಾಸೀಮ! ನಿನ್ನ ಆ

ಎಲ್ಲ ಹುಚ್ಚು ಚಟ್ಟಾರವನ್ನ ಬಿಡು ಇಲ್ಲದಿದ್ದರೆ, ನಮ್ಮ ಎಲ್ಲ ಪ್ರಯತ್ನಗಳು ನಿಷ್ಫಲವಾಗಿ, ಕಡೆಗೆ ನೀನು ವಿಪತ್ತಿಗೆ ಗುರಿಯಾಗಬೇಕಾಗುವದು. ನಿಮ್ಮ ಸಾಮ್ರಾಟನು ಮಾಂತ್ರಿಕನಿರುವನು. ಅವನು ತನ್ನ ಸವಿಮಾತುಗಳಿಂದ ನಿಮ್ಮನ್ನು ಮೋಸಗೊಳಿಸುವನು ನೀವು ಆ ಮೋಹಪಾಶದಿಂದ ಮುಕ್ತರಾಗದಿದ್ದರೆ ನಿಮ್ಮ ಅವನತಿಗೆ ಮೇರೆಯೇ ಇಲ್ಲ.

ಕಾಶೀಮ:— ತಾಯಿ, ಈ ಸಾರೆ ಕಾಶೀಮನು ಹಾಗೆ ಮೋಸ ಹೋಗುವಂತೆ ಇಲ್ಲ. ಅವನು ಸಾಮ್ರಾಟನಿಗೇ ಎಚ್ಚರ ಹುಟ್ಟುವಂತೆ ಮಾಡುವನು. ವಜೀರ ಮೊದಲಾದವರು ಸಹ ಸಾಮ್ರಾಟನ ಲಾಂಗೂಲ ಚಾಲನವನ್ನು ಮಾಡಹತ್ತಿರುವರು. ಅವರಿಗೂ ಸಹ ತಿಳಿಯುವಂತೆ ಮಾಡುವೆನು.

ನಸೆರಿತಬೇಗಮ:—ಕಾಸೀಮ, ನೀನು ಸರಳಮನುಷ್ಯನು. ನಿನ್ನ ವಿಚಾರದಂತೆ ಈ ಕಾರ್ಯವು ಸಾಧಿಸುವದಿಲ್ಲ; ಆದರೆ ಪ್ರತಿಪಕ್ಷಿಗೆ ಅವಕಾಶ ಮಾತ್ರ ಸಿಕ್ಕು, ಅವನು ಎಚ್ಚರಗೊಳ್ಳುವನು. ದೊಡ್ಡ ಅಜಗರವೇ ಮುಸಲ್ಮಾನಸಾಮ್ರಾಜ್ಯವನ್ನು ಸುತ್ತು ಹಾಕಿ ಬಿಗಿದಿರುವದು. ಇಷ್ಟೇ ಅಲ್ಲ, ನಿಮ್ಮೆಲ್ಲರ ಮೇಲೆ ಹೆಡೆಯನ್ನೆತ್ತಿಕೊಂಡು ನಿಂತಿರುವದು. ಹಿಮ್ಮೆಲೆ ಅದರ ಹೆಡೆಯನ್ನು ಕತ್ತರಿಸದಿದ್ದರೆ ಮುಸಲ್ಮಾನಸಾಮ್ರಾಜ್ಯದ ಮೃತ್ಯುವೇ ನಿಶ್ಚಯವು.

ಕಾಸೀಮ:—ಹಾಗಾದರೆ ನೀವು ಹೇಳಿದಂತೆ............

ಬೇಗಮ:—ಹೇಳಿದಂತೆ ಅಂದರೇನು? ಆ ಪ್ರಕಾರ ಮಾಡಲಿಕ್ಕೇ ಬೇಕು ಮೊದಲು ಯಾವ ಕಾರ್ಯವನ್ನೂ ಮಾಡುವಂತಿಲ್ಲ. ಗುಪ್ತವಾಗಿ ವೈರಿಯ ನಾಶ ಮಾಡಿ, ನಂತರ ಎಲ್ಲ ಜನರಿಗೂ ತಾವು ಎಂಥ ಬಂಧನದಲ್ಲಿ ಸಿಕ್ಕಿದ್ದೆವೆಂಬದನ್ನು ತಿಳಿಸಿ ಹೇಳು.

ಕಾಸೀಮ:-ಅಮ್ಮಾ, ಆಗ ಜನರಿಗೆ ತಿಳಿಸಿ ಹೇಳುವದು ಕಷ್ಟವಲ್ಲವೆ?

ಬೇಗಮ:— ಅದೇಕೆ ಕಷ್ಟವು? ಎಲ್ಲರೂ ಸ್ವಾಭಿಮಾನರಹಿತರಾಗಿಲ್ಲ. ಭಯದಿಂದ ಕೆಲವರು, ಸ್ವಾರ್ಥದ ಸಲುವಾಗಿ ಕೆಲವರು ಅವನ ಪ್ರೀತಿಯನ್ನು ಸಂಪಾದಿಸಿರುವರು. ಅದೇ ಜನರು ಅವನ ಪತನದ ತರುವಾಯ ನಿನ್ನ ಕಾಲ ಮೇಲೆ ಹೊರಳಾಡುವರು. ಯಾಕೆ? ಕಾಸೀಮ, ಭಯಪಡುವಿಯೇನು? ಇಡೀ ಜಾತಿಯ ಕಲ್ಯಾಣಕ್ಕಿಂತ ನಿನ್ನ ಹಿಂದು

ವ್ಯಕ್ತಿಯ ಜೀವನವು ಹೆಚ್ಚಿನದಾದೀತೇನು? ಕಾಸೀಮ! ನೀನು ಮೊದ ಲಿನ ರಣಶೂರ ಕಾಸೀಮನಲ್ಲ! ಖಿನ್ನಸ್ವಭಾವಪರಿವರ್ತನೆಯಾಗಿರುವದು. ಜಾತಿಗೌರವಕ್ಕಿಂತ ಆತ್ಮಗೌರವವೇ ನಿನಗೆ ಈಗ ಪ್ರಾಧಾನ್ಯವಾಗಿರು ವದು. ನಿಮ್ಮ ಸ್ವಾರ್ಥಕ್ಕೆ ಧಿಃಕಾರವು! ನಿನ್ನ ಇಚ್ಛಿತ ರಮಣಿಯು. ನಿನ್ನನ್ನು ಅಪಮಾನಗೊಳಿಸಿದ್ದು, ಪುನಃ ನೀನು ಅವಳ ಪ್ರಿಯಪಾತ್ರನ ಸೇವೆಗೆ ಸಿದ್ಧನಾಗಬೇಕೆ? ಇಷ್ಟು ಪೌರುಷಹೀನನಾಗಿರುವೆಯಾ!! ನಿನ್ನ ಪ್ರೇಮದ ಪ್ರತಿದ್ವಂದ್ವವೂ, ಸಮಾಜ-ಧರ್ಮಗಳ ಶತ್ರುವೂ ಆದವನನ್ನು ಸಹೋದರನೆಂದು ಭಾವಿಸಿ ಕುರ್ನಿಶ ಮಾಡುವೆಯಾ? ಹೀಗಿದ್ದ ಮೇಲೆ ಹಿಂದೂಜನರ ವಿರುದ್ಧ ಸೈನ್ಯವನ್ನು ಏಕೆ ಕಳುಹಿಸುವಿ? ಆ ವಿಚಾರವೇ ಬೇಡ.

ಕಾಸೀಮನ ಮುಖವು ಕೆಂಪಾಯಿತು; ಕಣ್ಣುಗಳು ವಿಸ್ತೃತವಾ ದವು; ಶ್ವಾಸೋಚ್ಛ್ವಾಸವು ವೇಗದಿಂದ ಸಾಗಹತ್ತಿತು

ನಸೆರಿತ್ ಬೇಗಮಳು ಮತ್ತೆ:—ನನ್ನ ಹಾನಿಯೇನೂ ಇಲ್ಲ ಇದರ ಪ್ರತ್ಯಯವು ಮುಂದೆ ಹಿಂದು ದಿವಸ ನಿಮಗೇ ಬರುವದು. ಆಗ ಉಪಾ ಯವೇ ಇಲ್ಲ. ಹಸಿದ ಸಿಂಹವು ಪಂಜರದಲ್ಲಿ ಸಿಕ್ಕು, ಸರ್ಕಸಿನಲ್ಲಿ ಬೆಕ್ಕಿ ನಂತೆ ತಿರುಗಾಡುವದಲ್ಲ! ಆ ಪ್ರಕಾರ ನಿಮ್ಮ ಸ್ಥಿತಿಯಾಗುವದು. ಇನ್ನು ನನ್ನ ಪ್ರಯೋಜನವೇನು? ನಾನು ಹೋಗಿಬರುತ್ತೇನೆ, ಎಂದು ಹೊರಟಳು.

ಕಾಶೀಮನು ಅವಳ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು:- ಅವ್ವಾ, ಮಕ್ಕಳ ಮೇಲೆ ಕೋಪಗೊಂಡರೆ ಹೇಗೆ?

ನಸೆರಿತ ಬೇಗಮ:— ಕಾಶೀಮ, ಇನ್ನೇಕೆ ಆ ಸಂಬೋಧನವು? ಹಿಂದು ಕಾಲದಲ್ಲಿ ನಿನ್ನ ಮೇಲೆ ನನ್ನ ಸಥಿಯಿತ್ತು. ಇನ್ನೇಕೆ ಆ ವಿಚಾರವು?

ಕಾಶೀಮ:—ಅಮ್ಮಾ, ಇನ್ನು ಎರಡನೇ ಮಾತು ಬೇಡ ನಿನ್ನ ತೃಪ್ತಿಯ ಸಲುವಾಗಿ, ಜಾತಿಯವರ ಕಲ್ಯಾಣದ ಸಲುವಾಗಿ ನಾನು ಏನು ಮಾಡತಕ್ಕದ್ದೆಂಬದನ್ನು ಸ್ಪಷ್ಟವಾಗಿ ಹೇಳು.

ನಸೆರಿತ ಬೇಗಮಳು ಕಾಸೀಮನ ಕಡೆಗೆ ಹಿಮ್ಮೆ ದಿಟ್ಟಿಸಿ ನೋಡಿ:- ಕಾಶೀಮ, ಮಾಡುವಿಯಾ?

ಕಾಶೀಮ:—ನಾನು ದುರ್ಬಲಹಸ್ತದಿಂದ ಶಸ್ತ್ರಧಾರಣ ಮಾಡಿಲ್ಲ. ನನಗೆ ಆತ್ಮಪ್ರತಿಷ್ಠೆಯು ಬೇಡ. ಜಾತಿಯ ಕಲ್ಯಾಣವೇ ನನ್ನ ಮಂಗ

ಲವು ನಿಮ್ಮ ಯಾವ ಆಜ್ಞೆಯನ್ನು ಪಾಲನೆ ಮಾಡತಕ್ಕದ್ದು? ಹೇಳಿರಿ.

ಬೇಗಮ:— ಕಾಶೀಮ! ಕಾ:-'ಅಮ್ಮಾ'

ಬೇ:-'ಇಂದು ರಾತ್ರಿಯೇ ಬೇಕು' ಕಾ:-'ಏನು ಬೇಕು?'

ಯದುನಾರಾಯಣನ ಛಿನ್ನಮುಂಡವು ಕಾಶೀಮ, ತಾಯಿಯ ಇಚ್ಛೆಯನ್ನು ಪೂರ್ಣ ಮಾಡು ನನ್ನ ಪತಿಘಾತುಕನ ಶಿರಸ್ಸನ್ನು ನನಗೆ ಪುರಸ್ಕಾರವೆಂದು ಕೊಡು! ಕಾಶೀಮ, ಭಯಪಡಬೇಡ. ಅಂತಃಪುರದ-ಶಯನಮಂದಿರದೊಳಗೆ ಹೋಗುವ ಗುಪ್ತಮಾರ್ಗವನ್ನು ನಾನು ತೋರಿಸುತ್ತೇನೆ. ನೀನು ಸ್ವತಃ ಅವರ ಶಿರಸ್ಸನ್ನು ಛೇದಗೊಳಿಸತಕ್ಕದ್ದು. ಎರಡೂ ಶಿಕಾರಿಗಳು ಸುಖಸ್ವಪ್ನದಲ್ಲಿ ಮಗ್ನರಾಗಿರಬಹುದು. ಅವರಿಗೆ ಚಿರಕಾಲ ನಿದ್ರೆಯ ಸುಖವನ್ನು ಕೊಡು. ಬಾ, ನನ್ನ ಸಂಗಡ ಬಾ! ಹೀಗೆಂದು ಅವಳು ಕಾಶೀಮನ ಕೈ ಹಿಡಿದು ಜಗ್ಗಿಕೊಂಡು ಹೊರಟಳು.

---

೪

ಪಾಟ'ಗಳ ಮೇಲೆ ಒಮ್ಮಿಂದೊಮ್ಮೆ ಕಾಲುಸಪ್ಪಳವು ಕೇಳಬಂತು. ಇಬ್ಬರೂ ಚಮಕಿತರಾದರು. ಒಬ್ಬ ಚಾರನು ಓಡುತ್ತ ಬಂದು ಕುರ್ನಿಸ ಮಾಡಿ:— ಖುದಾವಂದ, ಬಾದಶಹನು ಕಿಲ್ಲೆಯಲ್ಲಿ ಬಂದಿರುವನು, ಎಂದು ಹೇಳಿದನು. ಕಾಶೀಮನು ಚಮಕಿತನಾಗಿ ಮುಂದೇನಾಯಿತು? ಎಂದು ಕೇಳಲು, ದೂತನು:— "ಖಾವಿಂದ, ನಮ್ಮ ಸೈನ್ಯವು ಇನ್ನು ಕಿಲ್ಲೆಯಿಂದ ಹೊರಬೀಳುವ ಉದ್ಯೋಗದಲ್ಲಿತ್ತು. ಬಾದಶಹನನ್ನು ನೋಡಿದ ಕೂಡಲೆ ಜನರು ಅಲ್ಲಿಂದಲ್ಲೇ ಸರಿದುಕೊಂಡರು. ಸೇನಾಪತಿ ಮುನೀಮಖಾನನು ಮೊದಲು ತಪ್ಪನ್ನೊಪ್ಪಿಕೊಳ್ಳಲಿಲ್ಲ. ಅಮೀರಖಾನನು ಮಾತ್ರ ಬಾದಶಹನ ಪಾದಗಳ ಮೇಲೆ ಬಿದ್ದು, ಒಪ್ಪಿಕೊಂಡು ಕ್ಷಮೆ ಬೇಡಿದನು," ಎಂದು ಹೇಳಿದನು. ಈ ಸಂಗತಿಯನ್ನು ಕೇಳಿ, ಇಬ್ಬರೂ ಸ್ತಂಭಿತರಾದರು ಖಾನನು ದೂತನನ್ನು ಕುರಿತು:—'ಮುಂದೇನಾಯಿತು?' ಎಂದು ಮತ್ತೆ ಕೇಳಿದನು.

ದೂತ:—ಬಾದಶಹನು ನಗುತ್ತ "ಮುನೀಮಖಾನ, ನನಗೆ ಸುದ್ದಿಯನ್ನು ಕೂಡ ತಿಳಿಸದೆ. ಯುದ್ಧಕ್ಕೆ ಹೊರಡುವ ಅವಶ್ಯಕತೆಯಿದ್ದಿಲ್ಲ. ಇರಲಿ, ಆದದ್ದು ಆಗಿಹೋಯಿತು. ನೀವು ಸೈನಿಕರಿಗೆ ಅಭಯವನ್ನು

ಕೊಟ್ಟು, ವೇಷಪರಿವರ್ತನೆಯನ್ನು ಮಾಡಿಕೊಂಡು ಕಾಶೀಮಖಾನನ ಕೋಣೆಯಲ್ಲಿ ಬರ್ರಿ'' ಎಂದು ಹೇಳಿ, ಹಿಂದೂ ಸೈನಿಕರ ಬಿಡಾರದ ಕಡೆಗೆ ಹೊರಟುಹೋದನು ಇನ್ನು ಅವರು ಬರಬಹುದು, ಎಂದು ಹೇಳಿ, ಹೊರಟುಹೋದನು ಕಾಶೀಮನು ಚಿಂತೆಯಿಂದ ಕೋಣೆಯಲ್ಲಿ ಅಡ್ಡಾಡ ಹತ್ತಿದನು.

ಆಗ ನಸೆರಿತ ಬೇಗಮಳು:—ಕಾಶೀಮ, ಮತ್ತೇನು ಚಿಂತೆ ಮಾಡುವಿ? ದೇವರ ಅನುಗ್ರಹದಿಂದ ಶಿಕಾರಿಯು ತಾನಾಗಿಯೇ ನಿನ್ನ ಹತ್ತರ ಬಂದಿರುವದು ಹಿಂದೇ ಕ್ಷಣದಲ್ಲಿ ನಿನ್ನ ಶತ್ರುವಿನ ನಾಶ ಮಾಡು. ಈ ಸುಸಂಧಿಯನ್ನು ಕಳಕೊಳ್ಳಬೇಡ! ಎಂದಂದು, ಉನ್ಮಾದಳಂತೆ ಕಾಶೀಮನ ಕಡೆಗೆ ನೋಡುತ್ತ ವಿಕಟಹಾಸ್ಯ ಮಾಡಹತ್ತಿದಳು

ಇಷ್ಟರಲ್ಲಿ ಬಾದಶಹನು ಅಲ್ಲಿಗೇ ಬಂದನು. ಕಾಶೀಮಖಾನನ ಮಸ್ತಕವು ತನ್ನಿಂದ ತಾನೇ ಬೊಗ್ಗಿತು; ಅವನು ಕುರ್ನಿಸ ಮಾಡಿದನು.

ಯದುನಾರಾಯಣನು ಮುಗುಳುನಗೆಯ ಗಂಭೀರಸ್ವರದಿಂದ:—ಖಾನಸಾಹೇಬ, ಗೌಡಸಾಮ್ರಾಟನು ದುರ್ಗದಲ್ಲಿ ಆಶ್ರಯ ಬೇಡಬಂದಿರುವನು ನಾನು ನಿಮ್ಮ ಅತಿಥಿಯು ಇದೇನು? ಬೇಗಮಸಾಹೇಬರೂ ಇಲ್ಲೇ ಇರುವರಲ್ಲ! ಮೊದಲು ನೋಡಿರಲಿಲ್ಲ; ಕ್ಷಮೆ ಮಾಡಬೇಕು, ಎಂದು ತಲೆ ಬೊಗ್ಗಿಸಿದನು.

ನಸೆರಿತ್ ಬೇಗಮಳ ಮುಖವು ಕೆಂಪಡರಿತು. ಶರೀರವು ನಡುಗ ಹತ್ತಿತು ಅವಳು ಕರ್ಕಸಸ್ವರದಿಂದ:— ಕಾಶೀಮ, ಮೊದಲು ಈ ಸೈತಾನನನ್ನು ಕೊಲ್ಲು. ಸುಮ್ಮನೆ ಏಕೆ ನಿಂತಿರುವಿ? ಎಂದು ಚೀರಿದಳು. ಕಾಶೀಮನು ಸುಮ್ಮನೆ ನಿಂತನು. ಬೇಗಮಳು ಮತ್ತೆ:— ಕಾಶೀಮ, ಭಯಪಡಬೇಡ! ಈಗ ಅನ್ಯವಿಚಾರವು ಬೇಡ ಮೊದಲು ಇವನ ನಾಮಶೇಷ ಮಾಡು. ಎಂದಳು ಆದರೂ ಕಾಶೀಮನು ನಿಶ್ಚಲನು. ನಸೆರಿತ ಬೇಗಮಳ ಧೈರ್ಯವು ಕಡಿಮೆಯಾಯಿತು ಅವಳು ವಿಕಟಹಾಸ್ಯದಿಂದ:—ಕಾಶೀಮ, ನನ್ನ ಹೊಟ್ಟೆಯಲ್ಲಿ ಬಹಳ ಸಂಕಟವಾಗುತ್ತದೆ. ಇನ್ನು ತಡೆಯೆನು. ಎಲೈ ಕೇಡಿ ಕಾಶೀಮ! ಹತಭಾಗ್ಯಕಾಶೀಮ!! ಪಠಾಣರ ರಕ್ತವು ಇಷ್ಟು [illegible]ಡಿಯಾಗಿರುವದೇನು? ಆಗಲಿ. ಇನ್ನು ನಾನು ಸಹಿಸೆನು. 'ಎಲೈ ಪತಿಘಾತುಕನೇ, ನರಕಕ್ಕೆ ಹೋಗು' ಎಂದಂದು

ತನ್ನ ವಕ್ಷಸ್ಥಳದಲ್ಲಿ ಮುಚ್ಚಿಟ್ಟುಕೊಂಡು ಬಂದ ಕಠಾರಿಯನ್ನು ವೇಗದಿಂದ ಮೇಲಕ್ಕೆ ಎತ್ತಲು, ಸಿಟ್ಟಿನ ಭರದಲ್ಲಿ ಅದು ಅವಳ ಮುಂಗೈಗೇ ಚುಚ್ಚಿ, ರಕ್ತವು ಭರದಿಂದ ಹರಿಯಹತ್ತಿತು. ಆದರಿಂದಲವಳು ನೆಲಕ್ಕೆ ಬಿದ್ದಳು.

ಕಲ್ಪನಾತೀತವಾದ ಈ ಅನರ್ಥೋಪಾತದಿಂದ ಸಾಮ್ರಾಟನು ದಂಗು ಬಡಿದಿದ್ದನು. ಆದರೂ ಸ್ವಲ್ಪ ಹೊತ್ತಿನಲ್ಲಿಯೇ ಸುಧಾರಿಸಿಕೊಂಡು ಕುಳಿತು ಬೇಗಮಳ ಕೈಯನ್ನು ನೀರಿನಿಂದ ತೊಳೆದು ಪರೀಕ್ಷಿಸಲು, ಅವಳ ನರಗಳು ಹರಿದಿದ್ದವು. ಸ್ವಲ್ಪ ಹೊತ್ತಿನಲ್ಲಿಯೇ ನಸೆರಿತಬೇಗಮಳ ಪ್ರಾಣವು ಕೂಡ ಹೋಗಿ ಬಿಟ್ಟಿತು! ಆಗ ಸಾಮ್ರಾಟನು:—'ಕಾಶೀಮ' ಎಂದನು.

ಕಾಶೀಮ:— ಸಾಮ್ರಾಟ, ನೀವು ಈಗ ನನ್ನ "ಬಂದಿ"ಯಾಗಿರುವಿರಿ, ಎಂದನು. ಕೂಡಲೆ ಸಾಮ್ರಾಟನು ಸುತ್ತಮುತ್ತು ನೋಡಲು ಸಶಸ್ತ್ರ ಸೈನಿಕರು ಅವನನ್ನು ಸುತ್ತಿಗಟ್ಟಿಕೊಂಡು ನಿಂತಿದ್ದರು ಆಗ ಯದುನಾರಾಯಣನ ರಕ್ತವು ಉಕ್ಕೇರಿ ಅವನು ತನ್ನ ಟೊಂಕಕ್ಕೆ ಕೈ ಹಾಕಲು, ಅಲ್ಲಿ ಖಡ್ಗವೇ ಇದ್ದಿಲ್ಲ!

ಕಾಸೀಮನು ತಿರಸ್ಕಾರದಿಂದ ನಗುತ್ತ:—ಗೌಡಸಾಮ್ರಾಟನಂಥ ವೀರನ ಬಳಿಯಲ್ಲಿ ಸದಾ ಶಸ್ತ್ರವಿರುವದು ಯೋಗ್ಯವು; ಆದರೆ ನೀವು ಅತಿಥಿಯಾಗಿ ಬಂದ ಕಾರಣ ನಿಮ್ಮ ರಕ್ಷಣೆಯ ಎಲ್ಲ ಭಾರವನ್ನೂ ವಹಿಸಿ, ನಿಮ್ಮನ್ನು ಪ್ರೇಮರೂಪ ಮೋಹ ಶೃಂಖಲೆಯಿಂದ ಬಂಧಿಸಿ, ಯಾವ ಕೊರತೆಯೂ ಆಗದಂತೆ ನೋಡಿಕೊಳ್ಳುವೆನು. ಸಾಮ್ರಾಟ, ಚಿಂತೆ ಮಾಡಬೇಡಿರಿ. ನೀವು ಸುರಕ್ಷಿತ ಸ್ಥಳದಲ್ಲಿ ಇರುವಿರಿ, ಎಂದು ಅನ್ನುವಷ್ಟರಲ್ಲಿ, ಅಶಮಾನತಾರಾಳು ಧೃತಗತಿಯಿಂದ ಅಲ್ಲಿಗೆ ಬಂದಳು; ಮತ್ತು ಅವಳು ಅಲ್ಲಿಯ ದೃಶ್ಯವನ್ನು ಚೆನ್ನಾಗಿ ನಿರೀಕ್ಷಿಸಹತ್ತಿದಳು. ಅಶಮಾನಳ ಆಗಮನದಿಂದ ಕಾಸೀಮನು ಚಂಚಲನಾದನು. ಸೈನ್ಯದ ವೇಷ್ಟನೆಯ ಬಂಧನವೂ ಕಡಿಮೆಯಾಗಿತ್ತು. ಆದರೂ ಕಾಸೀಮನು ಧೈರ್ಯ ತಂದುಕೊಂಡು ಅಶಮಾನಳನ್ನು ಕುರಿತು:—ಶಹಜಾದಿ, ಬಂದೆಯಾ? ಚಲೋದಾಯಿತು. ಯೋಗ್ಯ ಸಮಯಕ್ಕೆ ಬಂದೆ. ಎಲ್ಲ ಸಂಗತಿಯೂ ತಿಳಿದಿರಬಹುದು ಇಂದು ಗೌಡಸಾಮ್ರಾಟನು-ನಿನ್ನ ಹೃದಯೇಶ್ವರನು ಈ ಕ್ಷುದ್ರ ಸೇವಕನ ಹತ್ತಿರ ಆಶ್ರಯಕ್ಕೆ ಬಂದಿರುವನು. ಈಗ ಅಥಿತಿಸತ್ಕಾರಕ್ಕೆ ಪ್ರಾರಂಭವಾಗಿರುವದು.

ಅಕಮಾನಳು ಹುಬ್ಬುಗಂಟಿಕ್ಕಿ:—ಸೇನಾಪತೀ, ಕಾಸೀಮುಖಾನ, ಎಂದಳು

ಕಾಸೀಮು:— ಶಹಾಜಾದಿ, ಸೇವಕನಿಗೆ ಹುಕುಂ ಆಗಬೇಕು.

ಅಕಮಾನ:—ದಿಲ್ಲೀಶ್ವರನನ್ನು ಸೋಲಿಸಿದ ವೀರ ಕಾಸೀಮನಿಗೆ ಇಂಥ ವ್ಯವಹಾರವು ಯೋಗ್ಯವೆ? ಶರಣು ಬಂದ ಸಾಮ್ರಾಟನ ಸಂಗಡ ಈ ರೀತಿ ನಡಕೊಳ್ಳುವದು ಅಗೌರವವು. ನಿನ್ನಂಥ ರಣಕೇಸರಿಯು ವಿಚಾರ ಮಾಡಬಾರದೇನು?

ಕಾಸೀಮು:—ಶಹಜಾದಿ, ನೀನೇ ಹೇಳು. ವಿಜಯವನ್ನು ಪಡೆದ ರಣಕೇಸರಿಗೆ ನಿನ್ನಿಂದ ಎಂಥ ಪುರಸ್ಕಾರವು ದೊರೆಯಿತು? ಶಹಜಾದಿ, ಈಗ ನಾನು ಆ ಗೌರವವನ್ನು ಬಯಸುವದಿಲ್ಲ. ಕ್ಷಮೆ ಮಾಡಬೇಕು. ಅದಕ್ಕೆ ಪ್ರತಿಫಲವು-ನಮ್ಮ ಸಮಾಜದ ಅಪಮಾನವು-ದೊರೆತಿರುವದಲ್ಲವೆ?

ಅಕಮಾನ:—ಕಾಶೀಮು, ಹೀಗೇಕೆ ಮಾತಾಡುತ್ತೀ? ಹೀಗಿದ್ದರೆ, ಅಂದಿನ ದಿವಸ ನೀನೇ ಸಾಮ್ರಾಟನಾಗತಕ್ಕದ್ದಿತ್ತು; ಮತ್ತು ಸಾಮ್ರಾಟನನ್ನು ಅಂದಿನ ದಿವಸವೇ ಗೌಡದ ಹೊರಗೆ ಹಾಕತಕ್ಕದ್ದಿತ್ತು. ಇರಲಿ. ಇನ್ನು ಆ ಮಾತು ಏಕೆ? ಮೊದಲು ಸಾಮ್ರಾಟನನ್ನು ಮುಕ್ತಮಾಡುವಿಯೋ ಇಲ್ಲವೋ? ಹೇಳು.

ಕಾಶೀಮು:—ಶಹಜಾದಿ, ಈಗ ಆ ಮಾತು ಶಕ್ಯವಿಲ್ಲ.

ಅಕಮಾನ:— ಯಾರ ಎದುರಿಗೆ ಹೀಗೆ ಮಾತಾಡುವಿಯೆಂಬದು ಗೊತ್ತಿದೆಯೋ?

ಕಾಶೀಮು: — ಗೊತ್ತಿದೆ. ಚೆನ್ನಾಗಿ ಗೊತ್ತಿದೆ. ಬಾದಶಹ ಸೈಫುದ್ದೀನನ ಪೌತ್ರಿಯೂ, ಅಜೀಮುಶಹನ ಪುತ್ರಿಯೂ, ಸಾಮ್ರಾಟ ಜಲಾಲುದ್ದೀನನ ಪತ್ನಿಯೂ ಆದ ಅಕಮಾನತಾರಾಳ ಎದುರಿಗೆ ಈ ಮಾತಾಡುತ್ತೇನೆ ಶಹಜಾದಿ, ಕಾಶೀಮನು ಈಗ ನಿನ್ನ ಕಣ್ಣುಸನ್ನೆಗೆ ಹೆದರುವವನಲ್ಲ. ನೀನು ಸಾಮ್ರಾಟನ ಚಿಂತೆಯನ್ನು ಬಿಟ್ಟು, ಅರಮನೆಗೆ ಹೋಗು. ಬೇಕಾದರೆ ಎದುರಿಗೆ ಇದ್ದು ಕಾಶೀಮನ ವ್ಯರ್ಥಪ್ರೇಮದ ಪ್ರತಿಶೋಧವನ್ನು ಕಣ್ಣಾರೆ ನೋಡು, ಎಂದು ಸಂಕೇತವನ್ನು ಮಾಡಲು, ಒಬ್ಬ ದೂತನು ಬಂದು ಕುರ್ನಿಸ ಮಾಡಿ ನಿಂತನು. ಕಾಶೀಮನು ಅವನಿಗ ಬೇಡಿಯನ್ನು ತೆಗೆದುಕೊಂಡು ಬರಲಿಕ್ಕೆ ಹೇಳಿದನು.

ಅಶಮಾನಳು ಕೋಪದಿಂದ:— ಕಾಶೀಮ, ಸಾಮ್ರಾಟನ ಅಂಗ ಸ್ಪರ್ಶ ಮಾಡುವದು ನಿನ್ನಿಂದ ಸಾಧ್ಯವಿಲ್ಲ. ನಾನು ಸ್ವತಃ ಸಾಮ್ರಾಟ ನನ್ನು ಮುಕ್ತ ಮಾಡುವೆನು ಸಾಮರ್ಥ್ಯವಿದ್ದರೆ ತಡೆ, ಎಂದು ಅಂದು ಮುಂದೆ ಹೋಗಲು, ಸೈನಿಕರು ಮರ್ಯಾದೆಯಿಂದ ಹಿಂದೆ ಸರಿದು ದಾರಿ ಯನ್ನು ಕೊಡಲು, ಅಶಮಾನಳು ಹೋಗಿ ಸಾಮ್ರಾಟನ ಕೈ ಹಿಡಿದಳು

ಸಾಮ್ರಾಟನು ಈ ವರೆಗೆ ಏನೂ ಮಾತಾಡದೆ ಇಬ್ಬರ ಮಾತು ಗಳನ್ನು ಕೇಳುತ್ತ ನಿಂತಿದ್ದನು. ಅಶಮಾನಳ ಆಗಮನದಿಂದ ಕ್ಷಣಕಾಲ ಅವನ ಮನಸ್ಸು ಚಂಚಲವಾಗಿದ್ದರೂ ಮತ್ತೆ ಸ್ಥಿರತೆಯನ್ನು ಹೊಂದಿತು. ಅವನು ಅಶಮಾನಳನ್ನು ಕುರಿತು:—ಅಶಮಾನ, ಇದೆಂಥ ನಿನ್ನ ವಿಚಾರವು? ಗೌಡಸಾಮ್ರಾಟನು ತನ್ನ ಕೈಕೆಳಗಿನ ಸೇನಾಪತಿಯು ಬಂದಿಯಾಗಿ, ಹೆಂಡ ತಿಯ ಕೈ ಹಿಡಿದುಕೊಂಡು ಮುಕ್ತನಾದನೆಂದು ಅಪಕೀರ್ತಿಯನ್ನು ಹೊರ ಬೇಕೇ? ಇದು ಅಶಕ್ಯವು. ಸಾಮ್ರಾಟಪುತ್ರಿಯಾದ ಸಾಮ್ರಾಜ್ಞಿಯೇ, ಚಂಚಲಳಾಗಬೇಡ ಬಂಧಿತ್ವವೇ ನಮ್ಮ ಇಚ್ಛಿತವು ಹಿಂದೂ-ಮುಸ ಲ್ಮಾನರನ್ನು ಪ್ರೀತಿಯ ಬಂಧನದಿಂದ ಬಂಧಿಸುವದೇ ನಮ್ಮ ಹೇತುವು ಈ ಕಾರ್ಯದ ಸಲುವಾಗಿ ನಮ್ಮ ಜೀವದ ಮೇಲೆ, ಆತ್ಮಗೌರವದ ಮೇಲೆ ತಿಲಾಂಜಲಿ ಕೊಡಬೇಕು. ಆದ್ದರಿಂದ ಅಶಮಾನ! ಖಾನಸಾ ಹೇಬರ ಇಚ್ಛೆಯಂತೆ ಅವರಿಗೆ ಕೆಲಸಮಾಡಗೊಡು. ಎಲೈ ಸೈನಿಕರೇ, ಕರ್ತವ್ಯಚ್ಯುತರಾಗದೆ ಸೇನಾಪತಿಯು ಆಜ್ಞೆಯಂತೆ ದಕ್ಷತೆಯಿಂದ ಕೆಲಸ ಮಾಡಿರಿ. ಬರಬೇಕು, ಖಾನಸಾಹೇಬ ಬರಬೇಕು. ನಾನು ಸಿದ್ಧನಿರು ವೆನು. ನನ್ನನ್ನು ಬಂಧಿಸಬೇಕು ತಡಮಾಡಬೇಡಿರಿ ಯಾಕಂದರೆ, ಇನ್ನು ಮುನೀಮಖಾನ, ಅಮೀನಖಾನ ಗುಣರಾಮರಾಯ ಮೊದಲಾದ ವರು ಬರುವರು ಹಾಗಾದರೆ ನಿಮ್ಮ ಕಾರ್ಯಕ್ಕೆ ವಿಘ್ನ ಬಂದೀತು. ಅಶಮಾನ! ದೂರ ಹೋಗು ನಿಷ್ಕಾರಣ ಅಡ್ಡಿ ಮಾಡಬೇಡ ಬಾ, ಕಾಶೀಮಖಾನ, ಬೇಗ ಬಾ!! ಇಕೋ ನೋಡು. ನಾನು ಕೈ ಜೋಡಿಸಿ ನಿಲ್ಲುತ್ತೇನೆ, ಎಂದು ಕೈ ಮುಂದೆ ಮಾಡಿಕೊಂಡು ನಿಂತನು.

ಅಶಮಾನಳ ಕಣ್ಣುಗಳು ಅಶ್ರುಭರಿತವಾದವು ಅವಳು ಕಾಸೀ ವನ ಪಾದದ ಹತ್ತರ ಮೊಳಕಾಲೂರಿ ಕೈಜೋಡಿಸಿಕೊಂಡು ಕುಳಿತು, ಮುಖವನ್ನು ಮೇಲಕ್ಕೆತ್ತಿ ದೀನಸ್ವರದಿಂದ:— [illegible], ಹಾಗಾದರೆ

ಮೊದಲು ನನ್ನನ್ನು ಬಂಧಿಸು. ಸಾಮ್ರಾಟನಿಗೆ ಮಾಡತಕ್ಕ ಎಲ್ಲ ವ್ಯವಸ್ಥೆಯನ್ನೂ ನನಗೆ ಮಾಡು. ಅಪರಾಧಿನಿಯು ನಾನು. ಅನರ್ಥದ ಮೂಲ ಕಾರಣಳು ನಾನು. ಕಾಸೀಮ, ನೀನು ನನ್ನ ಮೇಲೆ ಅನಂತ ಉಪಕಾರ ಮಾಡಿರುವಿ; ಕಠಿಣ ಪ್ರಸಂಗದಲ್ಲಿ ಮೃತ ಪಿತನ ಅಂತಿಮ ವ್ಯವಸ್ಥೆಯನ್ನು ಮಾಡಿರುವಿ; ಆದರೆ ನಾನು ಮಾತ್ರ ನಿನ್ನ ಉದಾರತನದ ಪ್ರತಿಫಲರೂಪವಾಗಿ ನಿನ್ನ ಆಶಾಭಂಗ ಮಾಡಿರುವೆನು. ಕಾಸೀಮ, ಇದೊಂದು ಸಾರೆ ನಿನ್ನ ಉದಾರ ಹೃದಯವನ್ನು ತೋರಿಸಿ ಮೊದಲು ನನ್ನನ್ನು ಬಂಧಿಸು. ನನ್ನ ಅಪೇಕ್ಷೆಯೇನೂ ಇಲ್ಲ. ಸಾಮ್ರಾಟನ ಸನ್ನಿಧಾನದಲ್ಲಿರಬೇಕೆಂಬದೇ ನನ್ನ ಇಚ್ಛೆಯು ಅದನ್ನು ಪೂರ್ಣ ಮಾಡು. ಹಿಂದಕ್ಕೊಮ್ಮೆ ಅಣ್ಣನಂತೆ ಶೋಕಾಕುಲಳಾದ ಈ ಸಹೋದರಿಯ ಮಾನವನ್ನು ಕಾಯ್ದಿರುವಿ. ಈಗ ಮತ್ತೆ ಈ ಸಹೋದರಿಗೆ,-ನಿನ್ನ ಮಗಳಿಗೆ ಕಡೆಯ ಭಿಕ್ಷೆಯನ್ನು ನೀಡು, ಎಂದು ಸೆರಗೊಡ್ಡಿದಳು.

ಸಾಮ್ರಾಟನ ನಿಷ್ಕಪಟ-ನಿರ್ಭಯ ವರ್ತನದಿಂದ ಕಾಶೀಮನ ಮನಸ್ಸು ಮೊದಲೇ ಹೊಯ್ದಾಡಹತ್ತಿತ್ತು. ಅಕಮಾನಳ ದೈನ್ಯದ ಬೇಡಿಕೆಯೂ, ಸಹೋದರನೆಂಬ ಸಂಬೋಧನವೂ ಅವನ ಹೃದಯವನ್ನು ಮತ್ತಷ್ಟು ಅಲ್ಲೋಲ ಕಲ್ಲೋಲವಾಗಿ ಮಾಡಿತು. ಆ ವೀರನ ಕಣ್ಣುಗಳು ನೀರಿನಿಂದ ತುಂಬಿದವು. ಅವನು ಅಕಮಾನಳ ಕೈಹಿಡಿದು ಎಬ್ಬಿಸಿ, ಅವಳ ಕಣ್ಣೀರನ್ನೊರಿಸುತ್ತ:— ಅಕಮಾನ, ನನ್ನ ಪ್ರಿಯಸಹೋದರಿ, ಮುದ್ದುಮಗುವೇ, ನೀನು ಇಷ್ಟು ದಿವಸ "ಅಣ್ಣಾ ಕಾಸೀಮ" ಎಂದು ನನ್ನನ್ನು ಯಾಕೆ ಕರೆಯಲಿಲ್ಲ? ಈ ಕಾಸೀಮನು ರಾಜ್ಯವನ್ನೂ, ಆತ್ಮಪ್ರತಿಷ್ಠೆಯನ್ನೂ, ಐಶ್ವರ್ಯವನ್ನೂ ಇಚ್ಛಿಸುವದಿಲ್ಲ. ಇಂದಿನ ದಿವಸ ನೀನು ನನಗೆ ಕೊಟ್ಟ ಭ್ರಾತೃಮರ್ಯಾದೆಯು ಇಡಿ ಜಗತ್ತಿನ ಎಲ್ಲ ಸುಖಕ್ಕಿಂತಲೂ ಹೆಚ್ಚಿನದು. ಈ ಮೊದಲು ನಿನ್ನನ್ನು ಪ್ರೀತಿಸುತ್ತಿದ್ದ ಪ್ರೇಮವು ಜ್ವಾಲಾಮಯವು ಆದರಿಂದ ಶಾಂತಿಯು ದೊರೆಯುವಂತಿಲ್ಲ; ಆದರೆ ಈ ಸಹೋದರ ಪ್ರೇಮವು ನಿರ್ವ್ಯಾಜವು. ಅಕಮಾನ್, ನನ್ನ ಪ್ರಾಣ ಸಹೋದರಿ, ಇನ್ನೊಮ್ಮೆ "ಅಣ್ಣಾ ಕಾಶೀಮ!" ಎಂದು ಸಂಬೋಧಿಸು ಕೇಳುವಾ

ವಿಷಾದಮಧುರ ಸ್ವರದಿಂದ ಅಕಮಾನಳು:—ಭಾಯಿಜಾ ಕಾಸೀಮ,

ಅಣ್ಣಾ ಕಾಸೀಮ, ಎಂದು ಅಂದಳು.

ಆಗ ಕಾಸೀಮನು ತನ್ನ ಕೈಗಳಿಗೆ ತಾನೇ ಸರಪಳಿಯನ್ನು ಬಂಧಿಸಿಕೊಂಡು:—“ಸಮ್ರಾಟ, ನಾನು ಬಂದಿಯು. ನನಗೆ ದಂಡನೆಯನ್ನು ಮಾಡು. ನಾನು ರಾಜದ್ರೋಹಿಯು. ದೇಶದ್ರೋಹಿಯು. ನಿಮ್ಮ ಹಿಂದೂ-ಮುಸಲ್ಮಾನರ ಐಕ್ಯದ ಶತ್ರುವು. ನನ್ನ ಅಪರಾಧದ ವಿಚಾರಣೆ ಮಾಡಿರಿ,” ಎಂದನು.

ಆಗ ಸಾಮ್ರಾಟನು ವೇಗದಿಂದ ಬಂದು ಕಾಸೀಮನ ಬಂಧನವನ್ನು ಬಿಡಿಸಿ, ಅವನನ್ನು ಅಪ್ಪಿಕೊಂಡು:—ಕಾಸೀಮ, ದ್ವೇಷ, ಅಸೂಯೆ, ವೈರತ್ವ ಮೊದಲಾದ ಎಲ್ಲ ಕಲಂಕಗಳೂ ಈ ಅಭಾಗಿನಿಯಾದ ನೆಸೆರಿತ್ ಬೇಗಮಳ ರಕ್ತದ ಸಂಗಡಲೇ ಹರಿದು ಹೋಗಿವೆ. ನಮ್ಮಿಬ್ಬರ ಹೃದಯ ಯುದ್ಧದಿಂದಲೇ ಇಬ್ಬರಿಗೂ ಸಂಧಿಯಾಗಿರುವದು, ಎಂದು ಹೇಳಿ, ನಸೆರಿತ್ ಬೇಗಮಳ ಕಡೆಗೆ ನೋಡಿ:—ಕಾಸೀಮ! ಅಶಮಾನ!! ಪತಿಘಾತಕನ ಮೇಲೆ ಅದಾವ ಸ್ತ್ರೀಯು ದಯೆ ತೋರಿಸುವಳು? ಪಾಪ! ಇವಳು ದಾರುಣಮನಸ್ತಾಪದಿಂದಲೇ ಮರಣ ಹೊಂದಿದಳು ಭಾಯಿ ಕಾಸೀಮ, ನೀನು ಇವಳ ಸ್ನೇಹಕ್ಕೆ ಪಾತ್ರನಾಗಿದ್ದೆ. ನಾನು ಶತ್ರುವಾಗಿದ್ದೆನು ಈಗ ಮಾತ್ರ ನಾವಿಬ್ಬರೂ ಇವಳಿಗೆ ಅಷ್ಟೇ. ಮೊದಲು ಇವಳ ಸತ್ಕಾರವನ್ನು ಮಾಡುವಾ, ಎಂದು ಸಾಮ್ರಾಟನು ಅವಳ ಕಾಲುಗಳನ್ನೂ, ಕಾಸೀಮನು ಅವಳ ತಲೆಯನ್ನೂ, ಅಶಮಾನನು ಅವಳ ನಡುವಿನ ಭಾಗವನ್ನೂ ಎತ್ತಿಕೊಂಡು ಒಳಗೆ ಹೋದರು. ಸೈನಿಕರು ಅವರನ್ನು ಹಿಂಬಾಲಿಸಿದರು.

---

೨೫

ರಾಣಿ ತ್ರಿಪುರಾದೇವಿಯು ಗೌಡ ರಾಜಧಾನಿಗೆ ಬಂದು ಇಂದಿಗೆ ಐದು ದಿವಸಗಳಾಗಿರುವವು. ಈ ಐದು ದಿವಸ ನಗರದಲ್ಲಿ ಅಹೋರಾತ್ರ ಉತ್ಸವಗಳು ನಡೆದಿದ್ದು, ಈ ಉತ್ಸವದಲ್ಲಿ ನಗರದಲ್ಲಿಯ ಎಲ್ಲ ಹಿಂದೂ-ಮುಸಲ್ಮಾನರು ಒಮ್ಮನಸ್ಸಿನಿಂದ ಮಿಲಿತರಾಗಿದ್ದರು.

ಇಂದು ತ್ರಿಪುರಾರಾಣಿಯು ಗೌಡದರಬಾರದಲ್ಲಿ ಸಭೆಗೂಡಿಸಿ, ಗೌಡನಗರದ ಎಲ್ಲ ಪ್ರಮುಖ ಸರದಾರರೂ, ಮಂತ್ರಿಗಳೂ, ಸಾಮಾನ್ಯಜನರೂ ಕೂಡ ಬರಬೇಕೆಂದು ಆಜ್ಞಾಪತ್ರ ಕಳುಹಿಸಿದ್ದಳು ಸಾಮ್ರಾಟನ ಸಭಾಮಂಟಪದಲ್ಲಿ ರಾಣಿಯು ದರಬಾರವು ಉತ್ತಮ ರೀತಿಯಿಂದ ವ್ಯವಸ್ಥೆ

ಗೊಳಿಸಲ್ಪಟ್ಟಿತ್ತು. ಸೈನಿಕರು ಅಲ್ಲಲ್ಲಿಗೆ ನಿಂತು ಗದ್ದಲವಾಗದಂತೆ ವ್ಯವಸ್ಥೆ ಮಾಡುತ್ತಿದ್ದರು. ಸಾಮ್ರಾಟನ ಸಿಂಹಾಸನವು ಶೂನ್ಯವು. ಅದರ ಮುಂಭಾಗದ ಹಿಂದು ಬದಿಗೆ ಮೂರು ಆಸನಗಳನ್ನು ಮಂಡಿಸಿದ್ದರು. ಹಿಂದರಲ್ಲಿ ತ್ರಿಪುರಾರಾಣಿಯು; ಉಳಿದ ಎರಡು ಆಸನಗಳಲ್ಲಿ ಅವನೀನಾಥ ಮಹಾರಾಜನೂ. ಕಾಲಿಕಿಶೋರಭಟ್ಟನೂ ಕುಳಿತಿದ್ದರು ಸಭಾಸ್ಥಾನದ ಹಿಂದು ಮಗ್ಗಲಿಗೆ ಗೌಡಪ್ರಜೆಗಳೂ, ಇನ್ನೊಂದು ಮಗ್ಗಲಿಗೆ ರಾಣಿಯ ಕಡೆಯ ಜನರೂ ಕುಳಿತಿದ್ದರು. ಸಭೆಯು ನಿಸ್ತಬ್ಧವು.

ಭಟ್ಟಾಚಾರ್ಯರು ಎದ್ದು ನಿಂತು:—ಎಲೈ ಗೌಡನಗರದ ಮಹಾಜನರುಗಳಿರಾ, ನಾವು ನಿಮ್ಮಿಂದ ಕಲ್ಪನಾತೀತವಾದ ಆದರ-ಸತ್ಕಾರವನ್ನು ಹೊಂದಿರುವೆವು. ಇದರಿಂದ ನಮ್ಮ ರಾಣಿಯು ಬಹಳ ಸಂತುಷ್ಟಳಾಗಿರುವಳು ಜಗತ್ತಿನಲ್ಲಿಯ ಯಾವ ಯುದ್ಧದ ಪರ್ಯವಸಾನವೂ ಈ ಬಗೆಯಾಗಿ ಆಗಿರಲಿಕ್ಕಿಲ್ಲ! ಇಂಥ ಪ್ರಸಂಗದಲ್ಲಿ ಪರಸ್ಪರರು ತಮ್ಮ ಮನೋಭೀಷ್ಟವನ್ನು ನಿಷ್ಕಪಟವಾಗಿ ಹೇಳುವ ಸಲುವಾಗಿಯೇ ಇಂದಿನ ಈ ಸಭೆಯು. ರಾಣಿಯು ಇನ್ನು ಬೇಗನೆ ಸ್ವದೇಶಕ್ಕೆ ಹೊರಡುವಳು ಕಾರಣ ರಾಣಿಯು ಹೇಳುವ ಮಾತುಗಳನ್ನು ಎಲ್ಲರೂ ಸಮಾಧಾನದಿಂದ ಕೇಳಿ ತಮ್ಮ ಅಭಿಪ್ರಾಯವನ್ನು ಹೇಳತಕ್ಕದ್ದು, ಎಂದು ಹೇಳಿ ಕುಳಿತುಕೊಂಡನು.

ನಂತರ ತ್ರಿಪುರಾರಾಣಿಯು ಎದ್ದು ನಿಂತು:-ಎಲೈ ಬಂಧುಗಳೇ, ನಿಮ್ಮ ಸತ್ಕಾರದಿಂದ ನಾನು ಪ್ರೀತಳಾಗಿದ್ದರೂ ನಮ್ಮ ನಿಮ್ಮ ಪ್ರೇಮಸಂಬಂಧವು ನನ್ನ ಸ್ವರ್ಗೀಯ ಪತಿಯ ಪರವಾಗಿ, ಎಂದು ಭಾವಿಸಿರುವೆನು ಅವರ ಮುಖ್ಯ ಹೇತುವು ಹಿಂದೂ-ಮುಸಲ್ಮಾನರ ಐಕ್ಯವು! ನನ್ನ ಇಚ್ಛೆಯೂ ಅದೇ ಇರುವದು. ಹೀಗಿದ್ದರೂ ಕೂಡ ನಾನು ಹಿಂದೂಸೈನ್ಯ ತಕ್ಕೊಂಡು ಯುದ್ಧಕ್ಕೆ ಏಕೆ ಬಂದಿರಬಹುದೆಂಬದು ವಿಚಾರ ಮಾಡತಕ್ಕ ಸಂಗತಿಯಲ್ಲವೆ? ನಿಮ್ಮ ಆದರ-ಸತ್ಕಾರದಿಂದ ನಾವು ಸಂತೋಷಪಟ್ಟಿದ್ದರೂ ಇಷ್ಟರಿಂದ ತೃಪ್ತರಾಗಿ ನಾವು ತಿರುಗಿ ಹೋಗಬಹುದೆಂದು ನೀವು ಭಾವಿಸಬೇಡಿರಿ, ಎಂದಂದು ಸುಮ್ಮನಾದಳು. ರಾಣಿಯ ಮಾತುಗಳಿಂದ ಜನರಲ್ಲಿ ಸ್ವಲ್ಪ ಗಡಿಬಿಡಿ ಹುಟ್ಟಿತು. ಆಗ ಜೀವನರಾಯನೆಂಬ ಮಂತ್ರಿಯು ಎದ್ದು ನಿಂತು:—ಮುಸಲ್ಮಾನ ಮಂತ್ರಿಗಳೇ ಮತ್ತು ಮುಸಲ್ಮಾನ ಬಂಧುಗಳೇ, ರಾಣಿಯು ಮನಸ್ಸಿನ ಯಾವ ತಾಪದಿಂದ ಇಲ್ಲಿಗೆ ಬಂದಿರುವಳೋ,

ಅದನ್ನು ವಿಚಾರ ಮಾಡಿದರೆ ಅವಳ ಮಾತುಗಳು ಯೋಗ್ಯವೇ ಸರಿ ಅದ್ದರಿಂದ ನಾವು ಬೇರೆ ರೀತಿ ಭಾವಿಸದೆ, ನಮ್ಮ ಪೂಜ್ಯ ಮಾತೃಸ್ವರೂಪ ರಾಣಿಯು ಮನೋಭೀಷ್ಟ ಪೂರ್ಣಮಾಡಲಿಕ್ಕೆ ಎಲ್ಲರೂ ಸಿದ್ಧರಾಗಿರತಕ್ಕದ್ದು ಕಾರಣಅವಳ ಅಭಿಪ್ರಾಯವನ್ನು ಶಾಂತ ಮನಸ್ಸಿನಿಂದ ಕೇಳಿಕೊಳ್ಳತಕ್ಕದ್ದು, ಎಂದು ಹೇಳಿದನು.

ಅಗ ಅವನೀನಾಥನು ಎದ್ದು ನಿಂತು:— ಮುಸಸ್ಮಾನ ಬಂಧುಗಳೇ, ನಿಮ್ಮಿಂದ ಈ ಪ್ರಕಾರದ ಆದರ-ಸತ್ಕಾರವ ಉಪಭೋಗಿಸುವದಕ್ಕಿಂತ ಯುದ್ಧವೇ ನಮ್ಮ ಹಿತದ ಮಾರ್ಗವಾಗಿತ್ತು. ನೀವು ಮಾಡಿದ ಆದರ-ಉತ್ಸವಗಳಿಂದ ನಮಗೆ ಸುಖವೆನಿಸಲಿಲ್ಲ. ಇವು ನಮ್ಮ ಜೀವಂತ ಶ್ರಾದ್ಧದ ಸಿದ್ಧತೆಯಂತೆ ಭಾಸವಾಯಿತು. ನಿಮ್ಮ ಅತಿಥಿಸತ್ಕಾರ - ದೀನ ದರಿದ್ರರಿಗೆ ಹಾಕುವ ಮಿಷ್ಟಾನ್ನ ಭೋಜನಗಳು, ಸತ್ತನಂತರ ಪಿತೃಗಳ ಸಲುವಾಗಿ ಮಾಡುವ ಅನ್ನದಾನದಂತೆ ಕಲ್ಪನೆಯಾಗಿದೆ. ನಾವು ಸಮಕ್ಷಮ ಇದ್ದು, ನಮ್ಮ ಜೀವಂತ ಶ್ರಾದ್ಧವನ್ನು ಸಡಗರದಿಂದ ಮಾಡಿಸಿಕೊಂಡಂತಾಯಿತು; ಆದರೆ ಇದರಲ್ಲಿ ವಿಚಿತ್ರವೆಂದರೆ ಇಷ್ಟೆಲ್ಲ ಸಿದ್ಧಪಡಿಸಿದ ಮನುಷ್ಯನು ಮಾತ್ರ ಈ ವರೆಗೆ ಒಮ್ಮೆ ಸಹ ನಮ್ಮ ದೃಷ್ಟಿಗೆ ಬೀಳಲೊಲ್ಲನು. ಇದು ಎಂಥ ಅತಿಥಿ ಸತ್ಕಾರವೋ ತಿಳಿಯದು! ಈ ಪ್ರಕಾರ ಮಾಡಿದ್ದು ನಮ್ಮ ಸತ್ಕಾರವೋ, ಅವಮಾನವೋ ನನಗಂತೂ ತಿಳಿಯದು.

ಆಗ ಕಾಶೀಮಖಾನನು ಎದ್ದು ನಿಂತು— ಸಾತೋಡರಾಜನು ದುಃಖದಲ್ಲಿರುವನು. ಮಾತಿನ ಮೇಲಿಂದಲೇ ಅವನ ಮನೋವೇದನೆಯು ಕಲ್ಪನೆಯಾಗುವದು ಕಾರಣ ಈ ಬಗ್ಗೆ ಅವನಿಗೆ ಸಮಾಧಾನವಾಗುವಂತೆ ಉತ್ತರ ಹೇಳುವದು ನಮಗಂತೂ ಶಕ್ಯವಿಲ್ಲ. ಇನ್ನು ಪರಮ ಪೂಜ್ಯ ಮಹಾರಾಣಿಯುವರು ತಮ್ಮ ಇಚ್ಛೆಯನ್ನು ತಿಳಿಸಬೇಕಾಗಿ ವಿನಂತಿ ಮಾಡಿಕೊಳ್ಳುತ್ತೇವೆ.

ಭಟ್ಟಾಚಾರ್ಯ ಮಹಾಶಯನು ಎದ್ದು ನಿಂತು—:ನಿಮ್ಮ ಆದರ ಸತ್ಕಾರಗಳ ಅನುಭವ ಮಾಡಿದ ಮೇಲೆ ಆ ವಿಷಯವಾಗಿ ದೂಷಣೆ ಮಾಡುವ ಕಾರಣವಿಲ್ಲ; ಮತ್ತು ನಮಗೆ ನಿಮ್ಮ ಸಾಮ್ರಾಟನೂ ಬೇಡ; ಅವನು ಇಲ್ಲದಿರುವದೇ ನಮಗೆ ಉತ್ತಮವು. ನಮ್ಮ ಮುಖ್ಯ ಉದ್ದೇಶವೆಂದರೆ:—"ಗೌಡವು ಹಿಂದೂ ಜನರದು; ಇದು ಮುಸಲ್ಮಾನರದಲ್ಲ"

ಮುಸಲ್ಮಾನರಿಗಿಂತ ಹಿಂದುಗಳ ಸ್ವಾಮಿತ್ವವು ಹೆಚ್ಚಿನದು. ಮುಸಲ್ಮಾನರು ಇತ್ತೀಚಿಗೆ ಬಂದವರು. ಅವರಿಗೆ ಹಿಂದೂಜನರ ಆಚಾರ-ವಿಚಾರಗಳ ಗಂಧವು ಕೂಡ ತಿಳಿಯದ್ದರಿಂದ ಹಿಂದೂ ಧರ್ಮದ ಹಾನಿಯು ಬಹಳವಾಗಿ ಆಗಹತ್ತಿರುವದು. ಮುಸಲ್ಮಾನರು ನಮ್ಮ ಅತಿಥಿಗಳು. ಅವರು ನಮ್ಮ ರಾಜಛತ್ರದ ಕೆಳಗೆ ಶಾಂತತೆಯಿಂದ ವಾಸಮಾಡಿಕೊಂಡಿರಬಹುದು. ಅವರ ಸುಖೋಪಭೋಗಗಳ ಅನುಕೂಲತೆಯನ್ನು ನಾವು ಮಾಡಿಕೊಡುತ್ತೇವೆ; ಇದೇ ನಮ್ಮ ಮುಖ್ಯ ಹೇತುವು.

ಆಗ ಗೌಡ ದರಬಾರದ ವಜೀರಸಾಹೇಬರು ಎದ್ದು ನಿಂತು:— ಭಟ್ಟಾಚಾರ್ಯರ ಮಾತು ಬಹು ಭಾಗದಿಂದ ನಿಜವಿರುತ್ತವೆ. ಗೌಡಸಿಂಹಾಸನವು ಹಿಂದೂ ಜನರಿಂದ ಸ್ಥಾಪಿತವಾದದ್ದು. ನಾವು ಹೊಸದಾಗಿ ಬಂದವರು. ಅಲ್ಲದೆ, ಜನಸಂಖ್ಯೆಯಿಂದಲೂ ನಾವು ಕಡಿಮೆಯಿರುತ್ತೇವೆ. ಇದೆಲ್ಲವೂ ನಿಜವು; ಆದರೆ ಸಾಮ್ರಾಜ್ಯಾಧಿಕಾರವು ಚಿರಕಾಲ ಹಿಂದೇ ಜನಾಂಗದವರ ಹಿಡಿತನದ್ದಲ್ಲ ಸಾಮ್ರಾಜ್ಯ ಪ್ರತಿಷ್ಠೆ ಮಾಡಿದವರೆಂದು ಅದರ ಮೇಲೆ ಸದಾ ಅವರ ಸ್ವಾಮಿತ್ವವು ನಡೆಯಲಾರದು. ಹಾಗಾಗಿದ್ದರೆ ಇಷ್ಟೊಂದು ಜಾತಿಗಳ ಉತ್ಕರ್ಷ-ಅಪಕರ್ಷಗಳೂ ಜೀವಹಾನಿಯೂ ಆಗುತ್ತಿದ್ದಿಲ್ಲ; ಮತ್ತು ಭಾರತದ ಮೂಲ ಸ್ವಾಮಿತ್ವವು ಅನಾರ್ಯರದಾಗಿರುತ್ತಿತ್ತು ಇದಲ್ಲದೆ ಸ್ವರ್ಗೀಯ ಗಣೇಶನಾರಾಯಣಖಾನೆ ಮಹಾರಾಜರು ತಾವೇ ಬಾದಶಹರಾಗುತ್ತಿದ್ದರು ಇನ್ನು ಹಿಂದೂ ಜನರ ರೀತಿ ನಡಾವಳಿಗಳನ್ನು ತಿಳಿಯದೆ, ನಮ್ಮಿಂದ ಅಪರಾಧಗಳಾಗುವ ಸಂಭವವಿರುವದು; ಆದರೆ ವರ್ತಮಾನ ಪರಿಸ್ಥಿತಿಯಲ್ಲಿ ಹಿಂದುಗಳು ಭಯಪಡುವ ಕಾರಣವಿಲ್ಲ. ಯಾಕಂದರೆ ಹಿಂದೂ ಜನರ ನಡಾವಳಿ ಗೊತ್ತಿದ್ದ ಹಿಂದೂ ರಾಜಪುತ್ರನೇ ಮುಸಲ್ಮಾನ ಧರ್ಮ ಸ್ವೀಕರಿಸಿ ಬಾದಶಹನಾಗಿರುತ್ತಾನೆ.

ಆಗ ತ್ರಿಪುರಾದೇವಿಯು ಸ್ವತಃ ಎದ್ದು ನಿಂತು:— ವಜೀರಸಾಹೇಬ, ನಿಮ್ಮ ಸ್ಪಷ್ಟ ಮಾತುಗಳನ್ನು ಕೇಳಿ ನನಗೆ ಬಹಳ ಆನಂದವಾಗಿರುವದು. ಸಾಮ್ರಾಜ್ಯವು ಯಾವಾಗಲೂ ಯಾವ ಜಾತಿಯವರದೂ ಸ್ವತ್ತಿನದಲ್ಲ. ಇದು ನಿಜವು. ವಿಜಯಲಕ್ಷ್ಮಿಯು ಯಾರ ಕೊರಳಲ್ಲಿ ಮಾಲೆಯನ್ನು ಹಾಕುವಳೋ, ಅವರೇ ಸಾಮ್ರಾಜ್ಯದ ಹಿಡೆಯರು. ಹೀಗೆ ತಿಳಿದೇ ನಾವು ಯುದ್ಧಕ್ಕೆ ಬಂಧಿದ್ದೆವು. ನಿಮ್ಮ ಆಮಂತ್ರಣವ ಸ್ವೀಕರಿಸಿ, ನೃಪಶ್ರಾನ್ನ

ಭೋಜನಕ್ಕೆ ಬಂದಿದ್ದಿಲ್ಲ; ಆದರೆ ನೀವು ಮಾತ್ರ ಹೇಡಿಗಳಂತೆ ಯುದ್ಧಕ್ಕೆ ಅಂಜಿ ಒಪ್ಪಂದಸೂಚಕ ಪತಾಕೆಯನ್ನು ತೆಗೆದುಕೊಂಡು ಅರ್ಧದಾರಿಯ ಮೇಲೆ ಬಂದು ನಮ್ಮ ಸತ್ಕಾರ ಮಾಡಿದಿರಿ; ಮತ್ತು ಈ ಐದು ದಿವಸಗಳ ತನಕ ವಿಶೇಷ ಉತ್ಸವ ಮಾಡಿದಿರಿ. ಇಷ್ಟೆಲ್ಲ ಮಾಡುವ ಕಾರಣ ವೇನಿತ್ತು? ಯುದ್ಧ ಮಾಡುವದು ನಿಮ್ಮ ಕರ್ತವ್ಯವಾಗಿತ್ತು. ಇದರ ಮೇಲಿಂದ ನಾವು ಜಯಶಾಲಿಗಳಾದ್ದರಿಂದ ನಮ್ಮ ಒಡೆತನವು ಗೌಡದ ಮೇಲೆ ಇರುವದೆಂದು ಸಿದ್ಧವಾಗುವದು. ವಜೀರ ಸಾಹೇಬ, ಹಿಂದುಗಳು ಇನ್ನೂ ಹತವೀರ್ಯರಾಗಿಲ್ಲ. ನೀವು ಹಿಂದುಗಳ ಪ್ರಾಧಾನ್ಯವನ್ನು ಸ್ವೀಕರಿಸದಿದ್ದರೆ ಹಿಂದುಗಳಾದರೂ ನಿಮ್ಮ ಅಧಿಕಾರವನ್ನೇಕೆ ಮನ್ನಿಸಬೇಕು? ಇದಲ್ಲದೆ, ಇನ್ನು ಮುಂದೆ ನಿಮ್ಮ ವರ್ತಮಾನ ಗೌಡ ಸಾಮ್ರಾಟನಿಗೂ, ಭಾದುಡೀ ಮನೆತನಕ್ಕೂ ಏನೂ ರಕ್ತ ಸಂಬಂಧವಿಲ್ಲ. ಹಿಂದೂಧರ್ಮಶಾಸ್ತ್ರದಂತೆ ಧರ್ಮತ್ಯಾಗವು ಅಪಮೃತ್ಯುವಿಗೆ ಸಮಾನವು! ಇಂದಿಗೆ ಗೌಡಸಿಂಹಾಸನಕ್ಕೆ ಕುಳಿತವನು ಭಾದುಡೀ ರಾಜಪುತ್ರನ ಪ್ರೇತಾತ್ಮನು!! ಪ್ರೇತಾತ್ಮಕ್ಕೆ ಸಿಂಹಾಸನದ ಬಾಧ್ಯತೆಯಿಲ್ಲ. ಕಾರಣ ಈ ಸಿಂಹಾಸನದ ಸ್ವಾಮಿತ್ವವು ಭಾದುಡೀ ರಾಜಮನೆತನದ ಹಕ್ಕುದಾರನಾದ ಅನೂಪನಾರಾಯಣನದು. ಅವನೇ ನಿಜವಾದ ಬಾದಶಹನು. ಕಾರಣ ನಾವು ಅವನನ್ನು ಸಿಂಹಾಸನದ ಮೇಲೆ ಕೂಡಿಸಲಿಕ್ಕೆ ಬಂದಿರುವೆವು. ಉಚ್ಚಕುಲದ ಹಿಂದುವು ಮುಸಲ್ಮಾನನಾಗಿ ಸಿಂಹಾಸನದ ಮೇಲೆ ಕುಳಿತಿರುವನು ಇದಕ್ಕಿಂತ ಹಿಂದುಜನಾಂಗದ ಅಪಮಾನವು ಹೆಚ್ಚಿಗೆ ಆಗತಕ್ಕದ್ದೇನು? ವಜೀರಸಾಹೇಬ, ಧರ್ಮಾಂತರವೆಂದರೆ ಧರ್ಮದ ಅಪರಿಮಿತ ಹಾನಿಯು. ಇದರ ಕಲ್ಪನೆಯು ನಿಮಗೆ ಹೇಗೆ ಆಗಬೇಕು? ಪರಧರ್ಮವನ್ನು ಬುದ್ಧಿ-ವಿಶ್ವಾಸಗಳ ವಶವಾಗಿ ಸ್ವೀಕರಿಸಿದರೆ ಅದು ಕ್ಷಮ್ಯವು; ಆದರೆ ಸಾಮ್ರಾಜ್ಯಲಾಲಸೆ, ಮತ್ತು ವಿಷಯಸುಖಕ್ಕೆ ಮರುಳಾಗಿ ಬಾಲಕರ ಆಟದಲ್ಲಿಯ ಪರಿವರ್ತನೆಯಂತೆ ಮಾಡಿದ ಸ್ವಧರ್ಮತ್ಯಾಗವು ಅಕ್ಷಮ್ಯವು. ಅಂಥ ಗುರುತರ ಅಪರಾಧಿಗೆ ನೀವು ಸಹಜವಾಗಿ ಆಶ್ರಯ ಕೊಟ್ಟಿರುವಿರಿ. ಸ್ವಾಭಿಮಾನಪೂರ್ಣ ಭಾದುಡೀ ರಾಜವಂಶದ ಕೀರ್ತಿಗೆ ಕಲಂಕವನ್ನು ಹಚ್ಚಿದ ಕುಲಾಂಗಾರನಿಗೆ ಸರ್ವಶ್ರೇಷ್ಠವಾದ ಸನ್ಮಾನ ಮಾಡಲಿಕ್ಕೆ

ನಿಮಗೆ ಸ್ವಲ್ಪಾದರೂ ಹೇಯವು ಹುಟ್ಟಬಾರದೇನು? ನಮ್ಮ ಮತ್ತು ನಿಮ್ಮ ರಾಜ್ಯಗಳ ಪ್ರೇಮದ ಸ್ನೇಹದ ಫಲವು ಇದೇ ಏನು? ವಜೀರ ಸಾಹೇಬ, ಮುಸಲ್ಮಾನರು ಇಷ್ಟು ಸ್ವಾರ್ಥಿಗಳೆಂದು ನಾನು ತಿಳಿದಿದ್ದಿಲ್ಲ.

ರಾಜಾ ಜೀವನರಾಯನು ಎದ್ದು ನಿಂತು:—“ರಾಣಿಯ ಮಾತಿಗೆ ಮುಸಲ್ಮಾನ ಪಕ್ಷದ ಪರವಾಗಿ ನಾನು ಪ್ರತ್ಯುತ್ತರವನ್ನು ಕೊಡುತ್ತೇನೆ. ಮಾತಾ-ತ್ರಿಪುರಾದೇವಿಯವರ ಅಭಿಪ್ರಾಯದಂತೆ ಮುಸಲ್ಮಾನರು ಕೃತಘ್ನರು, ಸ್ವಾರ್ಥಿಗಳು ಆಗಿದ್ದರೆ ನೀವು ಭಾದುಡೀ ರಾಜ್ಯದ ಸಂರಕ್ಷಣೆಯ ಭಾರವನ್ನು ಮುಸಲ್ಮಾನ ಸೈನಿಕರಿಗೇ ಒಪ್ಪಿಸಿ ಬಂದ ಬಗೆ ಹೇಗೆ? ನಿಮ್ಮ ಏಕಮಾತ್ರ ವಂಶಕರವರ ಅನೂಪನಾರಾಯಣನನ್ನು-ನಿಮ್ಮ ಸರ್ವಸ್ವವನ್ನು-ಮುಸಲ್ಮಾನರ ಮೇಲೆ ನಂಬಿಗೆ ಇರದಿದ್ದರೆ, ಅವರ ಸ್ವಾಧೀನ ಪಡಿಸುವದು ಶಕ್ಯವೇ ಹೇಗೆ? ನಿಮ್ಮ ವ ನಸ್ಸಿನ ತಾಪದಿಂದ ನೀವು ಹೀಗೆ ಮಾತಾಡುತ್ತಿರುವಿರಿ. ಇದಲ್ಲದೆ, ಮುಸಲ್ಮಾನ ಸಮಾಜವು ಬಲಹೀನವಾಗಿಲ್ಲ. ಮಹಾತ್ಮಾ ಗಣೇಶನಾರಾಯಣನ ಮೇಲಿನ ಮಮತೆಯಿಂದ ನಿಮಗೆ ತಲೆ ಬಾಗಿಸಿರುವದು. ಯದುನಾರಾಯಣನು ಈಗ ಮುಸಲ್ಮಾನಧರ್ಮ ಸ್ವೀಕರಿಸಿದರೆ ಆ ತಪ್ಪಿಗೆ ಮುಸಲ್ಮಾನರು ಪಾಲುಗಾರರಲ್ಲ. ಅವರು ಯದುನಾರಾಯಣನಿಗೆ ಆಶ್ರಯಕೊಟ್ಟದ್ದು ಮುಸಲ್ಮಾನರ ಉದಾರತನವನ್ನು ವ್ಯಕ್ತಪಡಿಸುತ್ತದೆ; ಯಾಕೆಂದರೆ ಸ್ವರ್ಗವಾಸಿ ಮಹಾರಾಜರು “ಅಶಮಾನತಾರಾನ ಗರ್ಭಸಂತಾನವೇ ಗೌಡದ ಉತ್ತರಾಧಿಕಾರಿಯು” ಎಂದು ನಿಶ್ಚಯ ಮಾಡಿದ್ದರು. ಇನ್ನು ಅಶಮಾನತಾರಾಳು ಸ್ವಯಂ ಪ್ರೇರಣೆಯಿಂದ ಯದುನಾರಾಯಣನೇ ‘ಪತಿ’ ಎಂದು ನಿರ್ಧರಿಸಿದ್ದಳು. ಇದರಲ್ಲಿ ನಿಮ್ಮ ಪುತ್ರನ ವಿಷಯಲಾಲಸೆಯು ಎಷ್ಟೂ ಇಲ್ಲ. ಅವನು ತನ್ನ ತಂದೆಯ ವಚನವನ್ನೂ, ದೇಶದ ಹಿತವನ್ನೂ ಬಯಿಸಿ ಅಶಮಾನಳ ವಿವಾಹವನ್ನು ಮಾಡಿಕೊಂಡನು; ಮತ್ತು ಹಿಂದೂಮತದಂತೆ ಅವಳ ವಿವಾಹವು ಶಕ್ಯವಿಲ್ಲೆಂದು ತಿಳಿದು, ಉಪಾಯಗಾಣದೆ ಅವನು ಮುಸಲ್ಮಾನ ಧರ್ಮ ಸ್ವೀಕರಿಸಿರುವನು. ಅವನಿಗೆ ಮುಸಲ್ಮಾನರು ಆಶ್ರಯ ಕೊಡದಿದ್ದರೆ, ಸ್ವಧರ್ಮತ್ಯಾಗಿಯಾದ ಯದುನಾರಾಯಣನು ದಿಶಾಭ್ರಷ್ಟನಾಗಿ ಉಭಯಜಾತಿಗಳ ಐಕ್ಯತೆಯನ್ನು ಮಾಡದೆ, ಉಭಯ ಜಾತಿಗಳ ಶತ್ರುವಾಗಿ ನಿಲ್ಲುತ್ತಿದ್ದನು. ಈ ವಿಷಯದಲ್ಲಿ ಮುಸಲ್ಮಾನರು ಅಪರಾಧ

ವನ್ನೇನೂ ಮಾಡಿಲ್ಲ. ಭಾದುಡೀರಾಜಕುವರನನ್ನು ಪ್ರೇಮದಿಂದ ಬಗಲೊಳಗೆ ಕುಳ್ಳಿರಿಸಿಕೊಂಡಿರುವರು'' ಎಂದು ಹೇಳಿದನು.

ಕೂಡಲೆ ಅವನೀನಾಥನು ಉದ್ವೇಗದಿಂದ ಎದ್ದು ನಿಂತು:—ರಾಮ! ರಾಮ!! ನೀವು ಮಾತ್ರ ಮುಸಲ್ಮಾನರ ಪಕ್ಷವನ್ನು ಚನ್ನಾಗಿ ಸಮರ್ಥನೆ ಮಾಡಿದಿರಿ ಹಿಂದೂಧರ್ಮದ ಮೇಲೆ ಅವರು ಅನಂತ ಉಪಕಾರವನ್ನು ಮಾಡಿರುವರಲ್ಲವೇ? ಮಹಾರಾಣೀ, ನಿನ್ನ ಮಾತನ್ನು ಕೇಳಿ, ಇಲ್ಲಿಯ ವರೆಗೆ ಬಂದಂಥ ನಾನೇ ಮೂರ್ಖನು ಬೇಡ! ರಾಣೀ, ಇನ್ನು ಹೆಚ್ಚು ಕಾಲ ಈ ವಾತಾವರಣದಲ್ಲಿ ಇರುವದು ಬೇಡ!! ಹಿಂದಕ್ಕೆ ತಿರುಗು; ಇಲ್ಲವೆ ಈ ಮುದುಕನಿಗೆ ಅಪ್ಪಣೆಯನ್ನು ಕೊಡು. ನಾನು ಮುಸಲ್ಮಾನರ ಎಂಜಲವನ್ನು ತಿನ್ನುವ ಹಿಂದೂಕುಲಾಂಗಾರನ ರಾಜ್ಯದಲ್ಲಿ ಇರಲಾರೆನು. ನಾನು ಮೊದಲೇ “ಇವರ ಆದರ-ಸತ್ಕಾರಗಳಿಗೆ ಮರುಳಾಗಬೇಡ; ಬಂದ ಪ್ರಕಾರ ಯುದ್ಧವನ್ನು ಮಾಡು'' ಎಂದು ನಿನಗೆ ಹೇಳಿದೆನು. ಕಡೆಗೆ ಅವರು ಮೋಸದಿಂದ ನಮ್ಮನ್ನು ಮರಳು ಮಾಡಿದರು. ಇನ್ನು ಇವರು ಕೊಡುವ ಹಾರ-ತುರಾಯಿಗಳನ್ನು ಹಾಕಿಕೊಂಡು ಆನಂದದಿಂದ ಹಿಂದಕ್ಕೆ ತಿರುಗು, ಎಂದಂದನು

ಆಗ ಕಾಲಿಕಿಶೋರಿಭಟ್ಟಾಚಾರ್ಯರು ಎದ್ದು ನಿಂತು:— ರಾಜಾ, ಇಷ್ಟೇಕೆ ಹತಾಶನಾಗಿ ನಿಟ್ಟುಸಿರು ಬಿಡುತ್ತೀ? ನಾವು ಭೂತಕಾಲವನ್ನು ಮರೆತು, ವರ್ತಮಾನ ಕಾಲದಬಗ್ಗೆ ನಿಶ್ಚಿತ ಮಾಡಿಕೊಳ್ಳಬೇಕಾಗಿದೆ. ಕಾರಣ ಎಲ್ಲರ ಅಭಿಪ್ರಾಯವನ್ನು ಶಾಂತತನದಿಂದ ಕೇಳಿಕೊಳ್ಳಬೇಕಾಗಿರುತ್ತದೆ ನೀನು ನಿನ್ನ ಪುತ್ರಿಯಾದ ಕಿಶೋರಿಯು ಕಲವಾಗಿ ಚಿಂತೆಮಾಡಬೇಡ. ಅವಳು ಹಿಂದೂ ಸಾಧ್ವಿಯು. ಮುಸಲ್ಮಾನರ ಸಂಸರ್ಗದಿಂದ ಜಾತಿಭ್ರಷ್ಟವಾಗುವದೆಂಬ ಮಾತು ಅಯೋಗ್ಯವು ಕಲಿಕಾಲಕ್ಕನುಸಾರವಾಗಿ ಇನ್ನು ಈ ದೇಶವು ನಾಸ್ತಿಕಮಯವಾಗಲಿಕ್ಕೇ ಬೇಕು. ಇರಲಿ. ನಾವು ಮುಸಲ್ಮಾನರ ನಾಶಮಾಡಲಿಕ್ಕೆ ಬಂದಿಲ್ಲ. ಹಿಂದೂ ಸಂತಾನವು ಮುಸಲ್ಮಾನ ಧರ್ಮ ಸ್ವೀಕರಿಸಿ ಹಿಂದೂ ಧರ್ಮದ ಶತ್ರುವಾಗಬಾರದೆಂದು ಆ ಕುಸಂತಾನದ ನಾಶಕ್ಕಾಗಿ ಬಂದಿರುವೆವು ಮುಹಮ್ಮದನು ಸೋಮನಾಥವನ್ನು ಸುಲಿದನು; ಅಲ್ಲಾಉದ್ದೀನನು ಸ್ತ್ರೀಯರ ಮಾನಭಂಗ ಮಾಡಿದನು. ಇವು ಹಿಂದು ವೇಳೆ ಸಹನ ಮಾಡತಕ್ಕವು; ಆದರೆ ಇದೇನು?

ಹಿಂದೂ ಪುತ್ರನು ಹಿಂದೂ ಧರ್ಮದ ಶತ್ರುವು! ಅಂತೇಯೇ ತಾಯಿಯು, ಪರಮ ಕರುಣಾಮಯಿ ಜನನಿಯು ಧರ್ಮಾಭಿಮಾನಕ್ಕೋಸುಗ ಅಪತ್ಯ ಪ್ರೇಮಕ್ಕೆ ಬೆಂಕಿಹಚ್ಚಿ ಯುದ್ಧಕ್ಕೆ ಬಂದಿರುವಳಲ್ಲವೇ?

ಆಗ ರಾಣಿಯು ಎದ್ದು ನಿಂತು:---ನನ್ನ ಪ್ರಿಯ ಮುಸಲ್ಮಾನ ಪ್ರಜೆಗಳೇ, ಬಹಳ ಮಾತುಗಳೇಕೆ? ನನ್ನ ಕಡೆಯ ಮಾತುಗಳನ್ನು ಕೇಳಿರಿ. ನಿಮ್ಮ ವರ್ತಮಾನ ಬಾದಶಹನನ್ನು ಸ್ವಾಧೀನ ಪಡಿಸಿರಿ, ಎಂದು ನಾವು ಕೇಳುತ್ತೇನೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು?

ರಾಣಿಯ ಮಾತುಗಳಿಂದ ಗೌಡಪ್ರಜೆಗಳಲ್ಲಿ ಗಡಿಬಿಡಿಯುಂಟಾಯಿತು. ಆಗ ಸೇನಾಪತಿಯಾದ ಕಾಸೀಮಖಾನನು ಎದ್ದು ನಿಂತು:—ಅಮ್ಮಾ, ಸಾಮ್ರಾಟನು ಈಗ ನನ್ನ ಆಶ್ರಯಕ್ಕೆ ಬಂದು ಅತಿಥಿಯಾಗಿ ದುರ್ಗದಲ್ಲಿರುವನು. ಶರಣು ಬಂದವರನ್ನು ಕೊಡುವ ಬಗೆ ಹೇಗೆ? ನಾನೂ ನಿಮಗೆ ಪುತ್ರಸಮಾನನು ಕಾರಣ ನಾನು ನಿಮಗೆ ಆತ್ಮಸಮರ್ಪಣೆ ಮಾಡಿರುವೆನು ಮಾಡತಕ್ಕ ಶಾಸನವನ್ನು ನನಗೆ ಮಾಡತಕ್ಕದ್ದು!!

ರಾಣಿಗೆ ಆಶ್ಚರ್ಯವೆನಿಸಿತು. ಅವಳು:—"ಸೇನಾಪತಿಯಾದ ಕಾಸೀಮಖಾನ, ಗೌಡ ಸಾಮ್ರಾಟನು ತನ್ನ ಸೇನಾಪತಿಯ ಆಶ್ರಯದಲ್ಲಿರುವೆನೆಂಬ ಮಾತು ನನಗೆ ಬಹಳ ಸೋಜಿಗವೆನಿಸುತ್ತದೆ ಇದು ವಿಚಿತ್ರವಲ್ಲವೇ?"

ಕಾಸೀಮಖಾನನು ನಗುತ್ತ:—ಅಮ್ಮಾ, ಇದರಲ್ಲಿ ವಿಚಿತ್ರವೇನು? ಮುಸಲ್ಮಾನಧರ್ಮ ಸ್ವೀಕರಿಸಿದ ಹಿಂದೂಸಾಮ್ರಾಟನೆಂಬುವದು ವಿಚಿತ್ರವಲ್ಲವೆ! ಕರ್ತವ್ಯಪರಾಯಣ ಮಗನ ಸಂಗಡ ತಾಯಿಯು ಯುದ್ಧಕ್ಕೆ ಬರುವದು ಸೋಜಿಗವಲ್ಲವೇ? ಇದೇ ಪ್ರಕಾರ ದಿಕ್ಕು ತೋಚದ ಸಾಮ್ರಾಟನು ಸೇನಾಪತಿಗೆ ಮರೆಹೊಕ್ಕಿರುವದೂ ವಿಚಿತ್ರವು!

ರಾಣಿ:—ಸಾಮ್ರಾಟನಿಗೆ ದಿಕ್ಕು ತೋಚದಂತಹ ಮತಿಗೆಡುವಂತಹ ಪ್ರಸಂಗವೇನು ಬಂದಿತ್ತು?

ಕಾಸೀಮ:—ತಾಯಿಯ ರೋಷವು! ಸಾಮ್ರಾಟನು ಮಾತೃವಿನ ಅಭಿಮಾನದಿಂದ ಭೀತನಾಗಿರುವನು.

ರಾಣಿ:—ನಿಮ್ಮಂಥ ಅತಿರಥಿ ಮಹಾರಥಿಕರು ಅವನ ಭಯವನ್ನು

ದೂರ ಮಾಡಲಿಕ್ಕೆ ಅಸಮರ್ಥರಾದಿರೇನು? ಆತನ ಆ ಅಂಜಿಕೆಯೂ ನನಗೆ ವಿಚಿತ್ರತರವಾಗಿ ಕಾಣಿಸುತ್ತದೆ.

ಕಾಸೀಮ:—ಅಮ್ಮಾ, ವಿಚಿತ್ರವೇನು? ತಾಯಿಯ ಹುಬ್ಬುಗಂಟಿನಿಂದಲೇ ಮಕ್ಕಳ ರಣನೀತಿ-ರಾಜನೀತಿಗಳೆಲ್ಲವೂ ತಲೆಕೆಳಗಾಗಿ ಹೋಗುತ್ತವೆ. ಈ ಗೌಡಸೈನ್ಯವೂ, ದಿಲ್ಲೀಶ್ವರನ ಸೈನ್ಯವನ್ನು ಸೋಲಿಸಿದ ಕಾಸೀಮನೂ, ಇಂಥ ಕಾಸೀಮನನ್ನು ಸೋಲಿಸಿದ ರಣಶೂರ ಸಾಮ್ರಾಟನೂ ಹೀನವೀರ್ಯರಾಗಿಲ್ಲ; ಆದರೆ ತಾಯಿಯ ಮುಂದೆ ಆ ಶಕ್ತಿಯೆಲ್ಲವೂ ಲೋಪವಾಗಿದೆ; ಆದ್ದರಿಂದಲೇ ದುರ್ಜಯವಾದ ಗೌಡವು ನಿಮ್ಮ ಪಾದಸೇವೆಗೆ ಸಿದ್ಧವಾಗಿರುದು; ಮತ್ತು ಶರಣು ಬಂದಿರುವದು.

ರಾಣಿ:—ಕಾಶೀಮ, ಈಗಿನ ಯುಗವು ಹೊಸದಾಗಿ ತೋರಹತ್ತಿದೆ. ಪೂರ್ವಕಾಲದ ಆಚಾರ-ವಿಚಾರಗಳು ಬದಲಾಗಹತ್ತಿರುತ್ತವೆ.

ಕಾಸಿಮ:—ಅಮ್ಮಾ, ಚಿರಕಾಲವೂ ಒಂದೇ ಯುಗವಿರುವದಿಲ್ಲ. ದೇಶಕಾಲಕ್ಕನುಸರಿಸಿ ಹೆಚ್ಚು-ಕಡಿಮೆಯಾಗುವದು. ತಾಯಿ, ನಿಮ್ಮ ಪುತ್ರನು ಸಾಮಾನ್ಯನಲ್ಲ. ಅವನು ಪ್ರವೃತ್ತಿಯ ದಾಸನಲ್ಲ. ಕರ್ತವ್ಯದ ಕ್ರೀತದಾಸನು. ಕರ್ತವ್ಯದ ಆಹ್ವಾನಕ್ಕೆ ಕರುಣಾಮಯಿಯಾದ ತಾಯಿಯ ಬಗಲೊಳಗಿಂದ ಪ್ರೇಮದ ಬಂಧನವನ್ನು ಹರಿದೊಗೆದು ಬಂದಿರುವನು. ಅವನ ಹೆಸರು ಮಾತ್ರ ಬೇರೆಯಾಗಿರುವದು. ಅದೇ ಹೃದಯವು ಈಗಲೂ ಇರುತ್ತದೆ. ಅಮ್ಮಾ, ಈ ಪಾಖಂಡ ಕಾಸೀಮನು ಈ ಮೊದಲು ಅವನ ವೈರಿಯಾಗಿದ್ದನು. ಅಪಮಾನತಾರಾಳು ನನ್ನ ಪ್ರಿಯವಸ್ತುವು; ಆದರೆ ನಿಮ್ಮ ಪುತ್ರನು ಈ ವೈರತ್ವವನ್ನು ಶತ್ರುವಾದ ನನ್ನ ಬಂದಿಯಾಗಿ ನಾಶ ಮಾಡಿದನು. ಅಮ್ಮಾ, ಏನು ಹೇಳಲಿ? ನಿಮ್ಮ ಮಗನು ಒಳ್ಳೇ ಜಾದುಗಾರನಿರುತ್ತಾನೆ!

ರಾಣಿ:—ಕಾಸೀಮ, ಮುಸಲ್ಮಾನರ ಸ್ವಜಾತಿ ಪ್ರೇಮವು ಹೊಗಳತಕ್ಕಂಥಾದ್ದು; ಆದರೆ ಈ ಪ್ರಕಾರ ಅಂಧವಾಗುವದು ಯುಕ್ತವಲ್ಲ.

ಕಾಸೀಮ:—ಈ ಮುಸಲ್ಮಾನ ಸಮಾಜವು ನಿಮ್ಮ ಪುತ್ರನಿಗೆ ಸಿಂಹಾಸನ ಕೊಟ್ಟು ಸುಮ್ಮನೆ ಕುಳಿತಿದ್ದಿಲ್ಲ; ಆದರೆ ನಿಮ್ಮ ಪುತ್ರನು ಕಲ್ಪನಾತೀತವಾದ ಆತ್ಮವಿಸರ್ಜನೆಯಿಂದ ಎಲ್ಲರನ್ನೂ ದಂಗುಪಡಿಸಿದನು ಎಲ್ಲ ಕಾರಸ್ಥಾನಗಳೂ ಮಣ್ಣುಪಾಲಾದವು! ಅಸ್ತ್ರಗಳು ನಿರ್ವೀರ್ಯವಾದವು!!

ಲೋಹಶೃಂಖಲೆಯು ಪುಷ್ಪಮಾಲೆಯಾಯಿತು ಮಾತೇ, ಅವನಿಂದ ನಿಮ್ಮ ಗೌರವವು ಕಲ್ಪನಾತೀತ ಶ್ರೇಷ್ಠವೆನಿಸಿರುವದು ಅಂಥ ನಿಮ್ಮ ಪುತ್ರನು ತನ್ನ ಸಮಸ್ತ ಅಧಿಕಾರವನ್ನು ಯುದ್ಧದ ವಿನಾ ಸಮರ್ಪಿಸಿ ದುರ್ಗದಲ್ಲಿ ಓಡಿ ಹೋಗಿ ಅಡಗಿಕೊಂಡು ಕುಳಿತಿರುವನು. ಆದ್ದರಿಂದ ಸಮಸ್ತ ಗೌಡವು ನಿಮಗೆ ಶರಣು ಬಂದಿರುವದು; ಮತ್ತು ಅದು ತನ್ನ ಇಡೀ ಗೌಡದ ಐಶ್ವರ್ಯಕ್ಕೆ ಪ್ರತಿಯಾಗಿ ಸಾಮ್ರಾಟನ ಭಿಕ್ಷೆಯನ್ನು ಬೇಡುತ್ತದೆ.

ಕಾಲಿಕಿಶೋರನು ಎದ್ದು ನಿಂತು:—ಈಗ ಅಂತಃಕರಣದ ಸುಲಿಗೆಯು ನಡೆದಂತೆ ತೋರುತ್ತದೆ ಇರಲಿ. ಕಾಸೀಮ, ಈ ಕ್ಷಮೆಗೆ ಪ್ರತಿಫಲವಾಗಿ ಹಿಂದೂ ಜನರಿಗೆ ದೊರೆಯುವದೇನು?

ಕಾಸೀಮ:—ಹಿಂದೂ ಜನರಿಗೆ ಮುಸಲ್ಮಾನರ ಜೀವವೇ ಪ್ರತಿಫಲವು. ಸಾಮ್ರಾಟ ಜಲಾಲುದ್ದೀನನ ಕಾಲದಲ್ಲಿ ಕಾಸೀಮಖಾನ ಸೇನಾಪತಿಯು ಪ್ರಾಣವಿರುವ ವರೆಗೆ ಹಿಂದೂ ಜನರ ಮತ್ತು ಸಮಾಜದ ಮೇಲೆ ಮುಸಲ್ಮಾನರಿಂದ ಸ್ವಲ್ಪ ಸಹ ಅನ್ಯಾಯವು ಒದಗಿದರೆ ಆ ಬಗ್ಗೆ ನನ್ನ ಜೀವವನ್ನು ಅಡವು ಇಡುತ್ತೇನೆ. ಈ ನಮ್ಮ ರಾಜ್ಯದಲ್ಲಿ ಹಿಂದೂ-ಮುಸಲ್ಮಾನರು ಅಣ್ಣತಮ್ಮಂದಿರು ಹಿಂದೂ-ಮುಸಲ್ಮಾನರಿಗೆ ಜೈ! ಭಾರತ ಮಾತಾಕೀ ಜೈ!! ಎಂದನು ಕೂಡಲೆ ಎಲ್ಲರೂ ಪ್ರತಿಯಾಗಿ ಜೈ ಜೈ ಕಾರ ಮಾಡಿದರು. ನಂತರ ಕಾಸೀಮಖಾನನು ಜೀವನರಾಯನನ್ನು ಕರೆದು:-ದಿವಾಣಜಿ ಬರಬೇಕು ಸಾಮ್ರಾಟನು ಈ ಸಂಧಿ ಪತ್ರವನ್ನು ಸ್ವಹಸ್ತದಿಂದ, ತನ್ನ ಹೃದಯದಲ್ಲಿಯ ರಕ್ತದಿಂದ ಬರೆದಿರುವನು. ಪೂರ್ಣವಾಗಿ ಓದಿರಿ, ಎಂದು ಜೇಬಿನೊಳಗಿಂದ ಒಂದು ಕಾಗದವನ್ನು ತೆಗೆದುಕೊಟ್ಟನು. ಜೀವನರಾಯನು ಓದಲಿಕ್ಕೆ ಎದ್ದು ನಿಂತನು. ಆ ಪತ್ರದ ಅಭಿಪ್ರಾಯವು:—

"ನನ್ನ ಧರ್ಮಾಂತರವು ಹಿಂದೂ-ಮುಸಲ್ಮಾನರ ಐಕ್ಯದ ಸಲುವಾಗಿ; ಮತ್ತು ನಾನು ಆ ಉದ್ದೇಶಕ್ಕಾಗಿ ರಾಜದಂಡವನ್ನು ಕೈಯಲ್ಲಿ ತೆಗೆದುಕೊಂಡಿರುವೆನು; ಮತ್ತು ಪ್ರೇಮ ನಿಧಿಯಾದ ತಾಯಿಯ ಬಂಧನವನ್ನು ಕಡಿದುಕೊಂಡು, ಧರ್ಮನಿಷ್ಠನಾದ ತ್ರಿಪುರನಿಗೆ ಮನಸ್ತಾಪವನ್ನು ಉಂಟುಮಾಡಿ, ಕಾಲಿಕಿಶೋರಾಚಾರ್ಯರಂಥ ಪಂಡಿತ ಮಹನೀಯರ ಆಶೀರ್ವಾದದಿಂದ ವಂಚಿತನಾಗಿ, ಪವಿತ್ರತೆಯುಳ್ಳ ಸಾಧ್ವಿಪತ್ನಿಯ ಹೃದಯವನ್ನು ಕ್ಷತವಿಕ್ಷತಮಾಡಿ, ವಿನಯಪಾತ್ರ ಪ್ರಿಯ ಪುತ್ರನಾದ ಗಣೇಶನಾರಾಯಣನನ್ನು ದೂರ ನೂಕಿ, ನಾನು ಈ ವಿಘ್ನಪೂರ್ಣ ಕಠೋರ ಕರ್ತವ್ಯ

ಭಾರವನ್ನು ವಹಿಸಬೇಕಾಗಿರುವದು. ಇದರ ಉದ್ದೇಶವು ಹಿಂದೂ-ಮುಸಲ್ಮಾನರ ಐಕ್ಯವು. ಎರಡೂ ಜಾತಿಯು ಜನರ ಜೀವನಗಳ ಪ್ರೇಮು ಮಿಲನವು. ಹಿಂದೂ ಜನರ ರಾಜ್ಯದಲ್ಲಿ ನಾನು ಜನಿಸಿದ್ದರಿಂದ ನಾನು ಹಿಂದುವು; ಮುಸಲ್ಮಾನ ಧರ್ಮ ಸ್ವೀಕರಿಸಿದ್ದರಿಂದ ಮುಸಲ್ಮಾನನು ನನಗೆ ಎರಡೂ ಧರ್ಮಗಳು ಸಮಾನವು ಕಾರಣ ನಾನು ಪೂರ್ಣ ಸಮದೃಷ್ಟಿಯಿಂದ ನಡೆಯುವದೆನೆಂದು ಈಗ ಪ್ರತಿಜ್ಞೆ ಮಾಡಿ ಹೇಳುತ್ತೇನೆ.

ನನ್ನ ಅಧರ್ಮತೆಗೆ ಕೋಪಗೊಂಡು ಮಾತೆಯು ಯುದ್ಧಕ್ಕೆ ಬಂದಿರುವದರಿಂದ ಈ ಅಜ್ಞಬಾಲಕನು ತನ್ನ ಕ್ಷುದ್ರವಿಚಾರದಂತೆ ಸರಿ ಕಂಡ ಮಾರ್ಗವನ್ನು ಅನುಸರಿಸಿರುವನು; ಮತ್ತು ಮಾತೆಯ ಪ್ರಸನ್ನತೆಯ ಸಲುವಾಗಿ ಇಡಿ ಗೌಡವು ಕೈಕಟ್ಟಿಕೊಂಡು ನಿಂತಿರುವದು. ಆದ್ದರಿಂದ ನಾನು ಅವರೆಲ್ಲರಿಗೂ ಋಣಿಯಾಗಿರುತ್ತೇನೆ. ನನ್ನ ಮುಖ ದರ್ಶನದಿಂದ ಅವಳ ಹೃದಯುವೇದನೆಯು ಸ್ಫೂರ್ತಿಗೊಂಡು ಅನರ್ಥಗಳಾಗಬಾರದೆಂದು ನಾನು ಅವಳ ಚರಣದರ್ಶನಕ್ಕೆ ಭೀತನಾಗಿರುವೆನು. ಕಾರಣ ದೂರದಿಂದಲೇ ಮಾತೆಯ ಚರಣವಂದನೆ ಮಾಡಿ, ದೈನ್ಯಭಾವದಿಂದ ಅವಳ ಕರುಣಭಿಕ್ಷೆಯನ್ನು ಬೇಡುತ್ತೇನೆ.

ಮಕ್ಕಳ ಸಂಗಡ ತಾಯಿಯ ಜಯವು ಶಾಶ್ವತವಾದದ್ದು; ಸರ್ವಕಾಲದಲ್ಲಿಯೂ ಶಾಶ್ವತವು; ಆದರೂ ನಾನು ಈ ಯುದ್ಧದ ಫಲಪ್ರಾಪ್ತಿಯ ಸ್ವರೂಪವಾಗಿ-ಪ್ರಿಯಕುಮಾರ ಅನೂಪನಾರಾಯಣನ ಸಲುವಾಗಿ-ಹಿಂದು ವಿಷಯದಲ್ಲಿ ಪೂರ್ಣ ಸಮ್ಮತಿಯನ್ನು ಕೊಡುವೆನು. ಧರ್ಮಾಂತರ ಮಾಡಿದ ಕಾರಣ ಶಾಸ್ತ್ರಸಮ್ಮತದಂತೆ ಭಾದುಡೀರಾಜ್ಯದ ಮೇಲಿನ ನನ್ನ ಸ್ವಾಮಿತ್ವವು ತಾನೇ ಇಲ್ಲದಂತಾಗಿದೆ. ಅನೂಪನಾರಾಯಣನೇ ಅದಕ್ಕೆ ವಾರಸನು; ಮತ್ತು ಇಂದಿನಿಂದ ನಾವು ಭಾದುಡೀರಾಜನನ್ನು ಸಾಮಂತ ರಾಜನೆಂದು ಎಣಿಸದೆ ಪೂರ್ಣ ಸ್ವತಂತ್ರ ಸಾಮ್ರಾಟನೆಂದು ತಿಳಿಯುತ್ತೇವೆ; ಮತ್ತು ಅವರ ಈ ಯುದ್ಧದ ವಿಜಯುಚಿಹ್ನರೂಪವಾಗಿ ನಮ್ಮ ರಾಜಭಾಂಡಾರವು ಪೂರ್ಣವಾಗಿ ಎದುರಿಗೇ ಇರುವದು. ಅವರು ಬೇಕಾದ ವಸ್ತುಗಳನ್ನು ಒಯ್ಯಬಹುದು; ಮತ್ತು ಬೇಗ ಅನೂಪಕುಮಾರನನ್ನು ಸಿಂಹಾಸನದಮೇಲೆ ಕೂಡ್ರಿಸಿ ಮನಸ್ಸಿಗೆ ಸಮಾಧಾನವನ್ನು ಮಾಡಿಕೊಳ್ಳಬೇಕು. ಮತ್ತು ನನ್ನ ಇಚ್ಛಿತ ಉದ್ದೇಶವು ಈಡೇರುವಂತೆ ಆಶೀರ್ವಾದವನ್ನು ಮಾಡತಕ್ಕದ್ದು.

ನನ್ನ ಪರಮಪೂಜ್ಯಮಾತೆಯ ಹಾಗು ಶ್ವಶುರ, ಪುರೋಹಿತ ಮತ್ತು

ನನ್ನ ಸ್ವಜಾತಿಯ ಸಮಸ್ತ ಹಿಂದೂಬಾಂಧವರಿಗೆ ನನ್ನ ಕಡೆಯ ವಿನಂತಿ ಯೇನೆಂದರೆ:—ಯದುನಾರಾಯಣನ ಅಸ್ತಿತ್ವವು ಇನ್ನು ಇಲ್ಲ. ಅವನು ಮರಣ ಹೊಂದಿರುವನು, ಎಂದು ಯಾರೂ ಎಂದೂ ಭಾವಿಸ ಕೂಡದು. "ಯದುನಾರಾಯಣನೇ ಜಲಾಲುದ್ದೀನನು! ಜಲಾಲುದ್ದೀನನೇ ಯದು ನಾರಾಯಣನು!! ನನ್ನ ನಿವೇದನವು ಇಲ್ಲಿಗೆ ಮುಗಿಯಿತು.

ದರಬಾರವು ಗಭೀರ ನಿಸ್ತಬ್ಧವು. ರಾಣಿಯ ಎರಡೂ ಕಣ್ಣುಗಳು ಅಶ್ರುಭರಿತವು. ಕಾಲಿಕಿಶೋರಾಚಾರ್ಯರು ಅಂಗೈಯ ಮೇಲೆ ಶಿರವನ್ನಿಟ್ಟು ಕೊಂಡು ಚಿಂತಾಕ್ರಾಂತರಾಗಿ ಮೌನದಿಂದ ಕುಳಿತುಬಿಟ್ಟರು. ರಾಜಾ ಅವನೀನಾಥನು ಒಂದು ದೀರ್ಘವಾದ ನಿಟ್ಟುಸಿರು ಬಿಟ್ಟನು. ಎಲ್ಲ ಜನರೂ "ಹಿಂದೂ-ಮುಸಲ್ಮಾನಕೀಜೈ! ಭಾರತಮಾತಾಕೀ ಜೈ! ಯದುನಾರಾ ಯಣ ಮಹಾರಾಜಕೀ ಜೈ!! ಸಮ್ರಾಟ ಜಲಾಲುದ್ದೀನ ಮಹಾರಾಜಕೀ ಜೈ!!! ಅಲ್ಲಾ ಹೋ ಅಕಬರ! ಎಂದು ಜಯ ಜಯ ಕಾರ ಮಾಡಿದರು. ಸಭೆಯು ವಿಸರ್ಜನೆಯಾಯಿತು.

## ಉಪಸಂಹಾರ.

ಬಹಳ ದಿವಸಗಳ ತರುವಾಯ ಭಾದುಡೀ ನಗರದಲ್ಲಿ ಮತ್ತೆ ಉತ್ಸ ವದ ವಾದ್ಯಗಳು ಬಾರಿಸಹತ್ತಿವೆ. ಒಂದೇ ಮುಹೂರ್ತದಲ್ಲಿ ಎರಡು ಶುಭಕಾರ್ಯಗಳು. ಅನೂಪನಾರಾಯಣನ ರಾಜ್ಯಾಭಿಷೇಕವು; ಮತ್ತು ವಿವಾಹವು ಉತ್ಸವದ ಒಂದು ತಿಂಗಳ ಪೂರ್ವದಲ್ಲಿಯೇ ದೇಶ-ದೇಶಾಂತ ರಕ್ಕೆ ನಿಮಂತ್ರಣ ಪತ್ರಿಕೆಗಳು ಕಳುಹಿಸಲ್ಪಟ್ಟವು. ಭಾದುಡೀ ಪ್ರಜೆಗಳೆಲ್ಲ ಆನಂದಮಗ್ನರು; ಆದರೆ ನವಕಿಶೋರಿಯು ಮಾತ್ರ ಪಾಪ! ಆ ಆನಂದ ದಲ್ಲಿ ಅವಳ ಪಾಲಿಗೆ ಸುಖವೇ ಇದ್ದಿಲ್ಲ. ಹೃದಯದಲ್ಲಿ ದಾರುಣವಾದ ಅಶಾಂತಿಯು! ಲಾವಣ್ಯದ ಭಗ್ನಾವಶೇಷಿಯಾದ ಕಿಶೋರಿಯು ಇನ್ನು ರಾಜಮಾತೆಯಾಗುವಳು; ಕಾರಣ ಅವಳು ಜುಲುಮೆಯಿಂದ ಆನಂದ ವನ್ನು ತಂದುಕೊಳ್ಳಬೇಕಾಗಿದೆ. ಅವಳು ತನ್ನ ನಿರ್ಜನವಾದ ಕೋಣೆ ಯಲ್ಲಿ ಕುಳಿತು ಬಹಳವಾಗಿ ಚಿಂತಿಸಿದಳು. ಮನಸ್ಸಿಗೆ ಸಮಾಧಾನವೇ ಇಲ್ಲ. ಅವಳು ಮನಸ್ಸಿನಲ್ಲಿ:-"ಅನೂಪನು ರಾಜನಾಗುವನು; ನಾನು ಇನ್ನು ರಾಜಮಾತೆಯು. ಯುದ್ಧಕ್ಕೆ ಹೊರಡುವ ಪೂರ್ವದಲ್ಲಿ ಯದುನಾರಾಯ ಣನು ಮಾಡಿದ ಆಶೀರ್ವಚನವು ಅವಳ ಸ್ಮರಣೆಗೆ ಬಂತು. ಪತಿಯ ಭವಿ

ಷ್ಯದ್ವಾಣಿಯು ಸಫಲವಾಯಿತು. ನಾನು ರಾಜಮಾತೆಯು. ಅವರು ಗೌಡ ಸಾಮ್ರಾಟರು! ಇಂಥ ಪ್ರಸಂಗದಲ್ಲಿ, ಅನೂಪಕುಮಾರನ ಮಂಗಲ ಪ್ರಸಂಗದಲ್ಲಿ ಅವರಿಗೆ ನಿಮಂತ್ರಣ ಕಳಿಸತಕ್ಕದ್ದು, ಎಂದು ಬರೆಯುವ ಸಾಹಿತ್ಯಗಳನ್ನು ತೆಗೆದುಕೊಂಡು ಬಹಳಹೊತ್ತು ಆಲೋಚಿಸಿ, ಕಡೆಗೆ ಒಂದು ಪತ್ರವನ್ನು ಬರೆದಳು. ಆ ಪತ್ರದ ಸಂಗತಿಯೇನೆಂದರೆ:—

ಶ್ರೀ

ಅನಂತ ಮಹಿಮಾನ್ವಿತ ಗೌಡ ಸಾಮ್ರಾಟರಿಗೆ:—

ಬರುವ........ಮಾಸದ........ನೇ ದಿವಸ ಕೈಲಾಸವಾಸಿ ಗಣೇಶ ನಾರಾಯಣ ಮಹಾರಾಜರ ಪೌತ್ರನಾದ ಅನೂಪನಾರಾಯಣನ ವಿವಾಹ ಮತ್ತು ರಾಜ್ಯಾಭಿಷೇಕಗಳನ್ನು ನೆರವೇರಿಸುವದು ಗೊತ್ತಾಗಿದೆ. ಈ ಸಮಾರಂಭಕ್ಕೆ ತಾವು ಬೇಗನೆ ಸಹಿತರಾಗಿ ಬರಬೇಕೆಂದು ಅಪೇಕ್ಷಿಸುತ್ತೇವೆ. ತಂದೆಯ ಹೆಸರಿನಿಂದಲೇ ಮಗನ ಪಟ್ಟಾಭಿಷೇಕವು ರೂಢಿಯು ಮಾತು; ಆದರೆ ಇಲ್ಲಿ ಆ ರೂಢಿಯನ್ನು ಮೀರಿದ್ದಕ್ಕೆ ಮತ್ತು ಪತ್ರದ್ವಾರದಿಂದ ನಿಮಂತ್ರಣ ಪತ್ರಿಕೆ ಕಳಿಸಿದ್ದಕ್ಕೆ ಕ್ಷಮಿಸಬೇಕು ಇತಿ.

ತಮ್ಮ ಆಜ್ಞಾಧೀನ, ಭಾವೀ ರಾಜಮಾತಾ. ನವಕಿಶೋರಿದೇವಿ.

ಅವಳು ತನ್ನ ಆ ಪತ್ರವನ್ನು, ತ್ರಿಪುರಾದೇವಿಗೆ ಸಂಪೂರ್ಣವಾಗಿ ಓದಿ ತೋರಿಸಿ, ಗೌಡ ನಗರಕ್ಕೆ ಕಳಿಸುವ ವ್ಯವಸ್ಥೆಯನ್ನು ಮಾಡಿದಳು.

ಅಶಮಾನತಾರಾಳ ಹೊಟ್ಟೆಯಲ್ಲಿ ಭಾವೀ ಗೌಡ ಸಾಮ್ರಾಟನು ಜನಿಸಿರುವನು ಅವನಿಗೆ ಅಮೋದನೆಂದು ನಾಮಕರಣ ಮಾಡಿದ್ದರು. ಪತಿ-ಪತ್ನಿಯರು ಬಾಲಕನ ಕ್ರೀಡಾ-ವಿನೋದಗಳಲ್ಲಿ ಮಗ್ನರಾಗಿ ಅತೀತ ದುಃಖವನ್ನು ಮರೆಯಹತ್ತಿದ್ದರು ಆಗ ದೂತನು ಬಂದು ನವಕಿಶೋರಿಯ ಪತ್ರವನ್ನು ಕೊಟ್ಟನು. ಸಾಮ್ರಾಟನು ಪತ್ರವನ್ನು ಓದಿ ಕಂಪಿತ ಹಸ್ತದಿಂದ ಅದನ್ನು ಅಶಮಾನಳ ಕೈಗೆ ಕೊಟ್ಟನು. ಅವಳು ಉದ್ವೇಗದಿಂದ ಆ ಪತ್ರವನ್ನು ಹಲವು ಸಾರಿ ಓದಿದಳು. ಅವಳ ಕಣ್ಣೊಳಗಿಂದ ಎರಡು ಹನಿಗಳು ಉದುರಿದವು. ನಂತರ ಪತಿಯನ್ನು ಕುರಿತು:—ಮುಂದೆ ಏನು ವಿಚಾರ ಮಾಡಿರುವಿರಿ? ಎಂದು ಕೇಳಿದಳು. ಆಗ ಸಾಮ್ರಾಟನು:- ಅಶಮಾನ, ಏನು ಹೇಳಲಿ? ನನಗೆ ಏನೂ ತೋಚದು; ಆ ಸರಳ ಹೃದಯದ ಲಾವಣ್ಯಮಯಿಯಾದ ಸಾಧ್ವಿಯ ಹೃದಯದಲ್ಲಿಯ ಜ್ವಾಲೆಯನ್ನು ಶಾಂತಮಾಡುವ ಉಪಾಯವಿಲ್ಲದಾಗಿದೆ.

ಅಶಮಾನ:—ನಡೆಯಿರಿ ಹಾಗಾದರೆ, ನಾವೆಲ್ಲರೂ ಹೋಗೋಣ.

ಸಾಮ್ರಾಟ:—ಅಶಮಾನ, ಹೋಗಲು ಇದು ತಕ್ಕ ಸಮಯವಲ್ಲ. ಹೋದರೆ, ಅಲ್ಲಿಯ ಎಲ್ಲ ಉತ್ಸವ-ಆನಂದಗಳು ವಿರಸವಾಗುವವು; ತಾಯಿಯ ಅಭಿಮಾನಾಗ್ನಿಯು ದ್ವಿಗುಣಿತವಾಗಿ ಪ್ರಜ್ವಲಿಸುವದು. ಸಮಾರಂಭದಲ್ಲಿ ಯಾವ ಹಿಂದುವೂ ಅನ್ನಗ್ರಹಣ ಮಾಡಲಿಕ್ಕಿಲ್ಲ.

ಅಶಮಾನ:-ಹಾಗಾದರೆ ಆಮಂತ್ರಣವನ್ನು ಮನ್ನಿಸಿ ಪತ್ರಕ್ಕೆ ಉತ್ತರ ಕಳಿಸಬೇಕಲ್ಲವೆ? ನನಗೆ ಅನೂಪನೂ ಅಷ್ಟೇ, ಆಮೋದನೂ ಅಷ್ಟೇ; ಕಾರಣ ನಾನೇ ಪತ್ರದಉತ್ತರ ಬರೆಯುತ್ತೇನೆ, ಎಂದು ಪತ್ರ ಬರೆದಳು.

ಶ್ರೀ

ಶ್ರೀ|| ಸೀತಾ ಸಮಾನ ಮಹಾರಾಣಿ ನವಕಿಶೋರಿದೇವಿಯ ಸನ್ನಿಧಾನಕ್ಕೆ:

ಮಹಿಮಾನ್ವಿತ ಗೌಡ ಸಾಮ್ರಾಟನ ಹೆಸರಿನಿಂದ ಕಳುಹಿಸಿದ ಆಮಂತ್ರಣ ಪತ್ರಿಕೆಯು ಮುಟ್ಟಿತು. ಎಲ್ಲರಿಗೂ ಮಹದಾನಂದವಾಯಿತು. ಗೌಡರಾಜ್ಯದಲ್ಲಿಯ ಎಲ್ಲ ದೇವಾಲಯ-ಮಸೀದೆಗಳಲ್ಲಿಯೂ ಭಾವೀರಾಜ ದಂಪತಿಗಳ ಕಲ್ಯಾಣ ಕಾಮನಾರ್ಥವಾಗಿ ಉತ್ಸವಗಳು ನಡೆಯುವಂತೆ, ಮತ್ತು ದರಿದ್ರರಿಗೆ ಅನ್ನದಾನ-ವಸ್ತ್ರದಾನಗಳು ದೊರೆಯುವಂತೆ ವ್ಯವಸ್ಥೆ ಮಾಡಿದೆ. ಮಂತ್ರಿಯಾದ ಜೀವನರಾಯನ ಸಂಗಡ ಅಭಿಷೇಕದ ಸಾಮಾನುಗಳನ್ನೂ, ಕಾಣಿಕೆಗಳನ್ನೂ ಕಳಿಸಿದೆ ಉತ್ಸವಕ್ಕೆ ಬರುವ ಅತೀವ ಇಚ್ಛೆಯಿದ್ದರೂ, ಕೆಲ ಆಂತರಿಕ ಕಾರಣಗಳಿಂದ ಬರಲಿಕ್ಕಾಗಲಿಲ್ಲ; ಕ್ಷಮಿಸಿರಿ. ಸರ್ವಸಾಕ್ಷಿಯಾದ ಭಗವಂತನನ್ನು ಗುಂಬಳು:-ದಂಪತಿಗಳ ದೀರ್ಘ ಕಲ್ಯಾಣ ಕಾಮನೆಯನ್ನು ಪುನಃ ಪುನಃ ಪ್ರಾರ್ಥಿಸುತ್ತೇನೆ. ನಿಮ್ಮ ಉದಾರ ಹೃದಯದಲ್ಲಿ ನಮ್ಮ ಸಪುಸ್ತ ಅಪರಾಧಿಗಳ ಕ್ಷಮೆಯಾಗುವದೆಂದು ನಂಬುತ್ತೇವೆ ನಿಮ್ಮ ಆಜ್ಞಾಧೀನ-ಪ್ರೀತಿಯಾಕಾಂಕ್ಷಿ,

ಅಶಮಾನತಾರಾ.

ಪತ್ರವನ್ನು ಓದಿ ಯದುನಾರಾಯಣನು ಒಂದು ದೀರ್ಘ ಶ್ವಾಸವನ್ನು ಬಿಟ್ಟನು!

ವಿವಾಹ ಸಮಾರಂಭವೂ, ರಾಜ್ಯಾಭಿಷೇಕವೂ ಯಥಾಸಾಂಗವಾಗಿ ಜರುಗಿದ ನಂತರ ಜೀವನರಾಯನು ಎಲ್ಲರ ಅಪ್ಪಣೆಯನ್ನು ಪಡೆದು, ನಂತರ ಕಿಶೋರಿದೇವಿಯ ಬಳಿಗೆ ಬಂದನು. ಆಗ ಅವಳು ಅಂದದ್ದು:—ನಿಮ್ಮ ಸಾರ್ವಭೌಮರಿಗೆ ಎಲ್ಲ ಸಂಗತಿಯನ್ನೂ ತಿಳಿಸಿರಿ. ಆಹೇರಿನ ಪೆಟ್ಟಿಗೆ

ಯನ್ನೂ, ಪತ್ರವನ್ನೂ ಅಶಮಾನತಾರಾಳಿಗೆ ಕೊಡಿರಿ, ಎಂದು ಹೇಳಿದಳು. ಆ ಪ್ರಕಾರ ಅವನು ಅವುಗಳನ್ನು ತಂದು ಕೊಡಲು, ಅಶಮಾನಳು ಉತ್ಸುಕತೆಯಿಂದ ಪತ್ರವನ್ನು ಓದಿದಳು. ಆ ಪತ್ರದ ಅಭಿಪ್ರಾಯವು ಹೀಗಿದ್ದಿತು;

ಶ್ರೀ

ಸುಮಂಗಲೆಯಾದ ಪ್ರಿಯ ಅಶಮಾನಳಿಗೆ:-ಶ್ರೀ ಹರಿಕೃಪೆಯಿಂದಲೂ ನಿಮ್ಮ ಆಶೀರ್ವಾದದಿಂದಲೂ ಎಲ್ಲ ಕಾರ್ಯವೂ ಯಥಾ ಸಾಂಗವಾಯಿತು. ನನ್ನ ಆಮಂತ್ರಣಕ್ಕೆ ಮಾನಕೊಟ್ಟು ಲೌಕಿಕವನ್ನು ಕಾಯ್ದದ್ದಕ್ಕೆ ಅಭಾರಿಯಿರುತ್ತೇನೆ; ಮತ್ತು ನಿಮ್ಮ ದಾನಕ್ಕೆ ಪ್ರತಿದಾನವನ್ನು ಕಳುಹಿಸತಕ್ಕ ಶಿಷ್ಟಾಚಾರದಂತೆ, ನಾನೂ ನಿಮಗೆ ಏನಾದರೂ ಕೊಡಬೇಕಲ್ಲವೆ? ಆದರೆ ನನ್ನ ಪ್ರಿಯ ಸಹೋದರಿ, ನಾನು ನಿನಗೆ ಏನು ಕೊಡಲಿ? ನನ್ನ ಹತ್ತರ ಏನು ಉಳಿದಿದೆ? ನನ್ನ ಸರ್ವಸ್ವವೂ ನಿನ್ನ ಆಧೀನವೇ ಆಗಿದೆ; ಆದರೂ ನಾನು ರಾಜಮಾತೆಯಲ್ಲವೇ? ಏನೂ ಕೊಡದಿದ್ದರೆ ಸಾಮ್ರಾಟನಿಗೆ ಕೋಪ ಬಂದೀತು. ತಂಗೀ, ನನ್ನ ಸೌಭಾಗ್ಯ ಚಂದ್ರಮನು ನಿನ್ನ ಭಾಗ್ಯಾಕಾಶದ ಮೇಲೆ ಉದಯಿಸಿರುವನು. ಅಂದಬಳಿಕ ನನ್ನ ಸೌಭಾಗ್ಯ ಸೂಚಕ ವಸ್ತುಗಳ ಮೇಲೆ ನಿನ್ನದೇ ಅಧಿಕಾರವು ಅವುಗಳನ್ನೇ ನೀನು ಧರಿಸತಕ್ಕದ್ದು.

ಪ್ರಿಯಸಹೋದರಿ! ನೀನು ನನ್ನ ಸೌಭಾಗ್ಯದ ಅಧಿಕಾರಿಯಾದ್ದರಿಂದ ಪುತ್ರ ಸಹಿತ ಸುಖವಾಗಿ ಇರು, ಎಂದು ಆಶೀರ್ವದಿಸುತ್ತೇನೆ ದರ್ಶನಾಪೇಕ್ಷೆಯು ಅತಿಶಯವಿದ್ದರೂ ಈ ಜನ್ಮದಲ್ಲಿ ಶಕ್ಯವಿಲ್ಲ. ಇದೇ ನನ್ನ ಕಡೆಯ ಪತ್ರವು. ಪತ್ರಕ್ಕೆ ಉತ್ತರ ಸಹ ಬೇಡ; ಯಾಕಂದರೆ ನಾನು ಹೋಗತಕ್ಕ ಸ್ಥಳಕ್ಕೆ ಪತ್ರಗಳು ಮುಟ್ಟುವದಶಕ್ಯವು. ಇತ್ಯಾಶೀಷಃ

ನಿಮ್ಮ ಭಾಗ್ಯಹೀನ ನವಕಿಶೋರಿದೇವಿ.

ತಾ. ಕ. ಇದರ ಸಂಗಡ ಕಳಿಸಿದ ಪತ್ರವನ್ನು ಸಾಮ್ರಾಟರಿಗೆ ಮುಟ್ಟಿಸು.

ನವಕಿಶೋರಿ.

ಅಶಮಾನಳು ಪತಿಯ ಕೈಯಲ್ಲಿ ಪತ್ರವನ್ನು ಕೊಟ್ಟಳು. ಆ ಪತ್ರವನ್ನು ಓದಿ ಸಾಮ್ರಾಟನ ಕಣ್ಣೊಳಗಿನ ನೀರು ತಾವೇ ತಾವಾಗಿ ಹೋಗಹತ್ತಿದವು. ಪತ್ರದ ಅಭಿಪ್ರಾಯವು ಇಂತು:

ಅಶಮಾನಳ ಸ್ವಾಮಿಯ ಸನ್ನಿಧಾನಕ್ಕೆ:—

ನೀವು ಗೌಡಸಾಮ್ರಾಟರು; ಮತ್ತು ಯೋಗ್ಯವಾದ ನ್ಯಾಯವನ್ನು ಕೊಡತಕ್ಕವರು. ನಿಮ್ಮ ಬಳಿಯಲ್ಲಿ ಈ ದೀನ ಅಬಲೆಯದೊಂದು

ಫಿರ್ಯಾದಿಯುಂಟು. "ಈ ಕಿಶೋರಿಯ ಪತಿಯು ಇವಳಿಗೆ ಮೋಸ ಮಾಡಿ, ಇವಳ ಸರ್ವಸ್ವವನ್ನೆಲ್ಲ ಅಪಹರಿಸಿ, ಕಡೆಯ ದರುಶನವನ್ನು ಸಹ ಕೊಡದೆ ಪಲಾಯನ ಮಾಡಿರುವನು; ಮತ್ತು ಆ ಪತಿಯು ಆಗ ಗೌಡದ ಪ್ರಜೆಯಾಗಿದ್ದು ಈಗಲೂ ಗೌಡದಲ್ಲಿರುವನು. ಈ ವಾದಿಯ ವಿನಂತಿಯು ಇಷ್ಟೇ, ನನ್ನ ಸ್ವಾಮಿಯು ಅಪಹರಿಸಿದ ಯಾವ ಸುಖವನ್ನೂ ನಾನು ಇಚ್ಛಿಸುವದಿಲ್ಲ. ನನ್ನ ಇಚ್ಛೆಯೇನಂದರೆ:—ಹಿಂದು ವೇಳೆ ಪತಿಯು ತನ್ನ ಅಪರಾಧವನ್ನು ಸ್ವೀಕರಿಸಿದ್ದಾದರೆ:—ಅವರು ಈ ಕಿಶೋರಿಯ ಸಲುವಾಗಿ ಅನರ್ಥಕ ಚಿಂತೆ ಮಾಡಬಾರದು.'' ಈ ಜನ್ಮದಲ್ಲಿ ಅವಳ ಆಶೆಯು ಸಾಧ್ಯವಾಗದಿದ್ದರೂ ಜನ್ಮಜನ್ಮಾಂತರದಲ್ಲಿ ಅವರೇ ಪತಿಗಳಾಗಿ ನನ್ನ ಆಶೆಯು ಪೂರ್ಣವಾಗಬೇಕೆಂದು ದೇವರಲ್ಲಿ ಪ್ರಾರ್ಥಿಸುವಳು''

ಆ ಪತ್ರವನ್ನು ಓದಿ, ಅವಳು ಕಳಿಸಿದ ಆಹೇರನ್ನು ನೋಡಿ, ದಂಪತಿಗಳಿಬ್ಬರೂ ಅತಿಶಯವಾಗಿ ಶೋಕ ಮಾಡಿದರು. ಕಡೆಗೆ ಸಾಮ್ರಾಟನು ಅಶಮಾನಳನ್ನು ಕರಕೊಂಡು ಕಿಶೋರಿಯ ಕ್ಷಮೆ ಬೇಡಿಕೊಳ್ಳಬೇಕೆಂದು ಭಾದುಡಿಗೆ ನೌಕಾ ಮಾರ್ಗದಿಂದ ಹೊರಟನು ಇವರ ನೌಕೆಯು ಕೋಟೆಯ ಸಮೀಪಕ್ಕೆ ಹೋಗಲು, ದಂಡೆಯ ಮೇಲೆ ಅಸಂಖ್ಯ ಜನರ ಕೋಲಾಹಲವು ಕೇಳಹತ್ತಿತು. ಭಯಂಕರವಾದ ಅಗ್ನಿಯು ಉರಿಯುತ್ತಿತ್ತು. ಆಗ ಸಾಮ್ರಾಟನು ದೂತರನ್ನು ಕಳುಹಿಸಿ ಸಮಾಚಾರ ವನ್ನು ತಿಳಿದುಕೊಳ್ಳಲು, ಪೂರ್ವ ದಿವಸದ ರಾತ್ರಿ ಕಿಶೋರಿಯು ಮರಣ ಹೊಂದಿದ ಸಂಗತಿಯು ತಿಳಿಯಿತು. ಶೋಕಾಕುಲನಾದ ಸಾಮ್ರಾಟನು ನೌಕೆಯನ್ನು ಅಲ್ಲಿಂದ ಹಾಗೇ ತಿರುಗಿಸಿ ಗೌಡಕ್ಕೆ ತಿರುಗಿ ಬಂದನು. ಅಲ್ಲಿಂದ ಬಂದ ಕೂಡಲೆ ಸಾಮ್ರಾಟನು ಹಾಸಿಗೆಯನ್ನು ಹಿಡಿದನು. ತನ್ನ ಸಾಧ್ವಿಯಾದ ಪತ್ನಿಯ ಮರಣಕ್ಕೆ ತಾನೇ ಕಾರಣನೆಂಬ ಹೃದ್ರೋಗದಿಂದ ಅವನು ಹಿಂದು ದಿವಸ ಇಹಲೋಕವನ್ನು ತ್ಯಜಿಸಿ ಕಿಶೋರಿಯ ಸನ್ನಿಧವನ್ನೈದಿದನು ಅವನು ಸಾಯುವ ಕಾಲಕ್ಕೆ ಕಾಸೀಮನ ಕೈಯಲ್ಲಿ ಕುಮಾರ ಆಮೋದನನ್ನು ಕೊಟ್ಟು:—"ಕಾಸೀಮ....ಅಶಮಾನ....ಹಿಂದೂ-ಮುಸಲ್ಮಾನ....ಐಕ್ಯ....ಭಗವಾನ್-ಅನೂಪ--ಆಮೋದ....ಸಮಾನ, ಎಂದನು ಕಡೆಗೆ ಹಿಂದೂ-ಮುಸಲ್ಮಾನರ ಐಕ್ಯಪ್ರತಿಷ್ಠಾಪಕನಾದ ಮಹಾತ್ಮಾ ಜಲಾಲುದ್ದೀನ ಸಮ್ರಾಟ-ಯದುನಾರಾಯಣ-ನ ಆತ್ಮವು ಜಡಸೃಷ್ಟಿಯನ್ನು

ಬಿಟ್ಟು ಪರಂಧಾಮವನ್ನೈದಿತು!

ಈ ಸುದ್ದಿಯು ಭಾಮುಡೀನಗರಕ್ಕೆ ಕಳುಹಿಸಲ್ಪಟ್ಟಿತು. ಅನೂಪಕುಮಾರನು ಪ್ರಯಾಗಕ್ಕೆ ಹೋಗಿ ತಂದೆಯ ಪಿಂಡಪ್ರದಾನವನ್ನು ಮಾಡಿದನು. ಇತ್ತ ಅಶಮಾನಳು ಪಾಟಣಾ ಪಟ್ಟಣದಲ್ಲಿ ಪತಿಯ ಸ್ಮರಣಾರ್ಥವಾಗಿ ಒಂದು ಮಸೀದೆಯನ್ನು ಕಟ್ಟಿಸುವ ವ್ಯವಸ್ಥೆಯನ್ನು ಮಾಡಿ, ಮಗನನ್ನು ಕರಕೊಂಡು ಗಂಗಾನದಿಯಲ್ಲಿ ನೌಕೆಯ ಮೇಲಿಂದ ತಿರುಗಿ ಹೊರಟಿದ್ದಳು. ಇತ್ತ ತ್ರಿಪುರಾದೇವಿಯೂ ಮೊಮ್ಮಗನಾದ ಅನೂಪನನ್ನು ಕರಕೊಂಡು ನೌಕೆಯಿಂದ ಇದೇ ಮಾರ್ಗವಾಗಿ ತಿರುಗಿದ್ದಳು. ಮಾರ್ಗದಲ್ಲಿ ಇಬ್ಬರ ನೌಕೆಗಳೂ ಎದುರುಬದುರಾದವು. ಅನೂಪನು ಹೊರಗೆ ಬಂದು ನೋಡಿದನು; ತನ್ನಂತೆಯೇ ಮುಖಚರ್ಯೆಯುಳ್ಳ ಒಬ್ಬ ಹನ್ನೆರಡು ವರ್ಷದ ಬಾಲಕನು ಆ ನೌಕೆಯ ಮೇಲಿದ್ದನು. ಆ ಬಾಲಕನು ಆ ನೌಕೆಯ ಮೇಲಿನ ಸ್ತ್ರೀಯ ಹೇಳಿಕೆಯ ಮೇಲಿಂದ 'ಅಣ್ಣಾ-ಅನೂಪ' ಎಂದು ಒದರಿ, ಓಡಿ ಬಂದು, ಇವನನ್ನು ಅಪ್ಪಿಕೊಂಡನು. ಆಗ ಅನೂಪನೂ ಸಂಭ್ರಮದಿಂದ:-ತಮ್ಮಾ, ಅನೋದ, ಎಂದು ಅವನನ್ನು ಆಲಿಂಗಿಸಿದನು. ಆಗ ತ್ರಿಪುರಾದೇವಿಯು ಹೊರಗೆ ಬರಲು, ಅಶಮಾನಳು ಅವಳ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ರೋದನ ಮಾಡಹತ್ತಿದಳು. ಆಗ ದಯಾಮಯಿಯಾದ ತ್ರಿಪುರಾರಾಣಿಯು ಎಲ್ಲವನ್ನೂ ಮರೆತು:-ಮಗೂ, ಅಶಮಾನ, ಏನು ಮಾಡತಕ್ಕದ್ದು? ಎಲ್ಲರೂ ಹೋದರು. ನಾನು ಮತ್ತು ನೀನು ಮಾತ್ರ ಉಳಿದವರು. ಬಾ ಮಗೂ, ನನ್ನ ಪಕ್ಕದಲ್ಲಿ ಬಾ, ಎಂದು ಎದೆಗೆ ಅವಚಿಕೊಂಡಳು.

ಆಗ ಅನೂಪನು ಅಶಮಾನಳಿಗೆ ನಮಸ್ಕಾರ ಮಾಡಿ, ಅವ್ವಾ:—ಇನ್ನು ನಾವಿಬ್ಬರೂ ಅಣ್ಣ-ತಮ್ಮಂದಿರು. ಭಾಮುಡಿಗೆ ಹೋಗಿ, ಅಲ್ಲಿಂದ ಗೌಡಕ್ಕೆ ಹೋಗೋಣ. ತಮ್ಮಾ, ಹೌದೋ ಅಲ್ಲವೋ? ಎಂದನು.

ಆಗ ರಾಣಿಯು:—ಹೌದು ಅಶಮಾನ, ಹಾಗೇ ಮಾಡೋಣ, ಎಂದು ಎರಡೂ ನೌಕೆಗಳನ್ನು ಭಾಮುಡೀ ಕೋಟೆಯ ಕಡೆಗೇ ತಿರುಗಿಸಿದರು. ನೌಕೆಯು ಮುಂದಕ್ಕೆ ಸಾಗಿತು. ಆಗ ಎಲ್ಲರೂ ಕೂಡಿ:—ಹಿಂದೂ-ಮುಸಲ್ಮಾನರಿಗೆ ಜಯ! ಅಲ್ಲಾ ಹೋ ಅಕಬರ!! ಎಂದು ಗರ್ಜಿಸಿದರು.

ಸಂಪೂರ್ಣ.